**ಸಾರಜ್ಞ sāra-jña.** one acquainted with the essence, etc. (My.).
**ಸಾರಜ್ಞೆ sāra-jñe.** a female who knows the essence, etc.: a female friend (ಮಿತ್ರೆ, ಸಖಿ, ಸಹಜೀವಕೆ, etc., ಕೆಳದಿ Mr. 305).
**ಸಾರಟ್ sāraṭ.** = ಸಾರೆಟ್, ಸಾರೋಟ್. a "chariot", a gig, a buggy, etc. (My.; Te.).
**ಸಾರಣ್ sāraṇ.** nearness, proximity (Abh. P. 9, 38. 100).
**ಸಾರಣ sāraṇa.** causing to go or flow. 2, dysentery, diarrhoea (ಬಗುಳ್ Śmd. Dh.). 3, a term used in saṅgīta (Bp. 19, 8).
**ಸಾರಣಿ sāraṇi.** *a canal, a drain, a channel, a water-pipe.* 2, the camel on which the sāravāna sits (My.). see ಹರಿಕಣೆ, ಹರುಕಣೆ.
**ಸಾರಣಿಗೆ sāraṇige.** a sieve, a strainer (ರಣ್ಣಿ, ಜಾಲನಿ Mr. 208).
**ಸಾರಣೆ sāraṇe.** = ಸಾರವಣೆ. applying to, plastering, smearing, smoothig [Tu.]; (with cow-dung, water, etc., C.; Prll. 3, 4; Bp. 4, 3; 47, 14; C. Bp. 5, 5. 51; Rām. 1, 13, 5; V. 14, 51; J. 17, 27). — ಸಾರಣೆಗೆಯ್. to plaster, to smooth (Śśv. 2, 72).
**ಸಾರಣೆ sāraṇe.** Tbh. of ಚಾರಣ. see ಅಂಕುಸ-.
**ಸಾರತಮ sāra-tama.** most excellent, etc. (My.).
**ಸಾರತರ sāra-tara.** worthier, more or very excellent, etc. (Bp. 40, 80; My.).
**ಸಾರಥಿ sārathi.** (fr. ಸರಥ). *a charioteer,* a coachman.
**ಸಾರಥಿತನ sārathitana.** = ಸಾರಥ್ಯ. (J. 13, 21).
**ಸಾರಥ್ಯ sārathya.** the office of a charioteer, charioteering, driving. (J. 13, 9).
**ಸಾರದೆ sārade.** Tbh. of ಶಾರದೆ. Sarasvatī. (ಶಾರದೆ Kk. 9; ಅರವಿನ್ದ ಭವನ ಅರಸಿ Śm. 8). — ಸಾರದೆಯಾಳ್ದ. -ಅಳ್ದ. Brahmā (ಬ್ರಹ್ಮನು Śm. 8).
**ಸಾರಭಂಜಿಕೆ sārabhañjike.** = ಶಾಲಭಂಜಿಕೆ, q. v. a doll, a courtezan, etc.
**ಸಾರಮತಿ sāra-mati.** good disposition of mind (Bp. 54, 41. 65).
**ಸಾರಮೇಯ sārameya.** (fr. ಸರಮಾ). *a dog.* (Bp. 55, 45. 54). ಸಾರಮೇಯಂಗಳ್, the two four-eyed brindled watch-dogs of Yama.
**ಸಾರಯ್ಸು sāraysu.** = ಸಾರಿಸು. to clean, etc. see s. ಸಾರವಣೆ.
**ಸಾರವ sārava.** (fr. ಸರಯು). *being on or belonging to the river Sarayu.*
**ಸಾರವಣೆ sāravaṇe.** = ಸಾರಣೆ. smearing, etc. (ಸಾರಯ್ಸುದು Śs.; Kk. 69; Abh. P. 12, 3; Mhr. ಸಾರವಣ).
**ಸಾರವತಿ sāra-vati.** N. of a plant (ಹಾಡಗ Mr. 134).
**ಸಾರವಾನ್ sāra-vān.** one who has strength, etc.; a scholar (ವಿದ್ವಾಂಸ Mr. 223).
**ಸಾರವಾನ sāravāna.** a camel-driver, a caravaneer (My.; B. 4, 181; Mhr., H.).
**ಸಾರವೆ sārave.** = ಸಾರ. scaffolding. (My.).
**ಸಾರಶನ sāraśana.** (fr. ಸರಶನ). = ಸಾರಸನ. see Si. s. ಉಡದಾರ.
**ಸಾರಸ sārasa.** (fr. ಸರಸ್ and ಸರಸ). relating or belonging to a pond. 2, *the Indian crane, Ardea sibirica* (ಶತಪತ್ರ, ಸಾರಸಪಕ್ಷಿ Nn. 49; ವಿಹಂಗ, ಪಕ್ಷಿಭೇದ Nn. 56; ಪುಷ್ಕರ, ಪೆಣ್ಣು ಲಕ್ಷ್ಮಣ Mr. 172). 3, a flamingo; a goose (ಹಂಸೆ 56; ಮರಾಲ Mr. 521). 4, *a lotus* (ಬಿಸಜ, ತಾವರೆ 56; ಅಮ್ಬುಜ 521). 5, the tree Pterospermum acerifolium (ಚೆಟ್ಟದಾವರೆ Mr. 117). 6, the gāvaṭe tree (ಗಾವಟೆ, ಗಾವಟೆಯ ಮರನು 56; ಗಾವಟೆ Mr. 142). 7, death, Yama (ಮೃತ್ಯು 56; ಕಾಲನ್ 521). 8, a mountain (ಗಿರಿ, ಪರ್ವತ 56; ಸಕಲಗಿರಿ 521). 9, nearness, proximity (ಸಮೀಪ, ಹತ್ತಿರೆ 56). 10, a shrewd, sharp man (ಧೂರ್ತ, ಚತುರನು 56). 11, = ಸಾರಸನ, a girdle or zone (ಮೇಖಲೆ, etc., ಉಡಿದಾರ Mr. 344; ಕಾಂಚಿ, ಒಡ್ಯಾಣ Cb.). — ಸಾರಸವಕ್ಕಿ. -ಪಕ್ಕಿ. = ಸಾರಸ No. 2 or 3. ಸಾರಸವಕ್ಕಿಯ ಧ್ವನಿ (ಕಹ ಕಹ Śs.).
**ಸಾರಸನ sārasana.** = *a woman's zone or girdle; a military belt or girdle* (ನಡುವಿನ ಪಟ್ಟಿ, ಒಡ್ಡ್ಯಾಣ; ಪುರುಷನು ಅಂಗಿತೊಟ್ಟು ಮೇಲೆ ಸುತ್ತಿದ ವಸ್ತ್ರ G.).
**ಸಾರಸವದನೆ sārasa-vadane.** a lotus-faced female (Bp. 46, 43).
**ಸಾರಸಿ sārasi.** *a female Indian crane.*
**ಸಾರಸ್ವತ sārasvata.** (fr. ಸರಸ್ವತೀ). relating or belonging to the river Sarasvatī. 2, relating to the goddess Sarasvatī. 3, eloquent, learned. 4, N. of the country about the Sarasvatī river. 5, N. of a muni. 6, N. of a particular class of Brāhmaṇas. 7, connected with saṁskṛita (ಸಂಸ್ಕೃತಸಮ್ಬನ್ಧವಾದ G.; ಪ್ರಾಕೃತ B. 4, 128).
**ಸಾರಸ್ವತಪುರ sārasvata-pura.** N. of a town (J. 17 sum.; 17, 18-20. 56).
**ಸಾರಾಂಶ sāra-aṁśa.** essence, substance; sap, pith; scope, purport; an abstract, epitome (ತಾತ್ಪರ್ಯ G.; B. 3, 93; My.; Mhr.).
**ಸಾರಾಯ sāraya. 1.** = (ಸರಾಯ, etc.), ಸಾರಾಯಿ. spirituous liquor, arrack, gin (My.; Te. ಸಾರಾ, ಸಾರಾಯಿ, ಸಾರಾಯೆ; T., M. ಚಾರಾಯ). ಸಾರಾಯ ಕುಡಿಯೋಣ (ಅನುತರ್ಷಣ, ಮದ್ಯಪಾನ G.). — ಸಾರಾಯಗಿಡ್ಡಂಗಿ. an arrack-godown (My.). — ಸಾರಾಯಗುತ್ತಿಗೆ. a tax levied on the sale of spirituous liquors (My.). — ಸಾರಾಯದ ಅಂಗಡಿ. an arrack shop, a gin shop (My.).
**ಸಾರಾಯ sāra-āya. 2.** = ಸಾರಾಂಶ. (Bp. 2, 36; J. 5, 48). [essence, superior. ಇನ್ತಿ ಕ್ರಿವಿಧದಲ್ಲಿ ಸಮ್ಬನ್ಧ ಸಾರಾಯವ ಬಲ್ಲ ಬಸವಣ್ಣಂಗಲ್ಲದೆ ಮತ್ತಾರಿಗೆಯೂ ಅಳವಡದು Cv. 185, 264]. ಊರಿಂಗೆ ದಾರಿಯನು ಯಾರು ತೋಱುವಡೇನು? ಸಾರಾಯದಾ ನಿಜವ ತೋಱುವಾ ಗುರುವು ಯಾರಾದಡೇನು? (Sp.).
**ಸಾರಾಯಿ sārayi.** = ಸಾರಾಯ 1. (Si. 348; B. 4, 25. 71). ಸಾರಾಯಿ ಮಾಡುವ ಗಡಂಗು (ಗಂಜಿ Si. 108).
**ಸಾರಾಸಗಟು sārāsagaṭu.** in the gross; in the lump; indiscriminately (My.; Mhr. ಸರಸಗಟೆ).
**ಸಾರಾಸಾರ sāra-asāra.** substantial and unsubstantial, valuable and worthless, real and vain; substance and emptiness, the fat and the lean, the good and the bad (My.; B. 5, 100; Mhr.).
**ಸಾರಿ sāri.** (fr. ಸಾರ್ 1). = ಸಾರೆ 1 No. 2. a going or coming: a time, a turn; time (C.; M. ಸಾರಿ; ಚಾಲ್, time; see ಬಯ್ಸಾರಿ, ಮುಚ್ಚಾರಿ). ಹದಿನೆಣ್ಟು ಸಾರಿ ಜಿಪ್ಪೆ ಅಡಿಸುವಷ್ಟು ಹೊತ್ತು (ಕಾಷ್ಠೆ Si. 40); ಸನ್ತೋಷ ತ್ವರೆ ಮುನ್ತಾದವುಗಳಿನ್ದ ಎರಡು ಮೂಱು ಸಾರಿ ನುಡಿದ ಮಾತೇ ಮರಳಿ ಮರಳಿ ನುಡಿಯಲ್ ಪಡುವದು (ಆಮ್ರೇಡಿತ 56); ಎರಡು ಸಾರಿ ಮದುವೆ ಆದವಳು (ಪುನರ್ಭೂ, etc. 189); ಬಹುಕಾಲಕ್ಕೆ ೧ ಸಾರಿ ಈಯುವ ಆಕಳು (ಚಿರಸೂತೆ, etc. 322); ವರುಷಕ್ಕೆ ಒನ್ದೇ ಸಾರಿ ಬೆಳೆಯುವ ನೆಲ್ಲು (ಹಾಯನ 434); ಒನ್ದು ಸಾರಿ (ಸಕೃತ್, ಏಕವಾರ 467). ವರುಷಕ್ಕೆ ನಾಲ್ಕು ಸಾರಿ ತೆಂಗಿನ ಕಾಯಿಗಳನ್ನು ಕೊಯ್ಯುತ್ತಾರೆ (B. 2, 42).
**ಸಾರಿ sāri. 1.** going, moving, proceeding, resorting to, running, flowing. 2, having the essence or substance of. see ಅಭಿ-, ಪ್ರ-.
**ಸಾರಿ sāri. 2.** = ಶಾರಿ q. v., ಸಾಲೆ 4. a chess-man, etc. (ಶಾರಿ Nr.; Si. 349; ಆಕರ್ಷ Mr. 492; Bp. 43, 3. 13-15; Bh. 2, 13, 33. 46. 49. 50). see ನೆತ್ತ-, Nr. s. ಅಯ್ದಾಸು, and ಮಣ್ಣಚಿ, etc.

**ಸಾರಿಕೆ sārike.** = ಶಾರಿಕೆ, ಸಾರಕೆ. *the bird called Maina* (*either the Gracula religiosa or the Turdus salica*). 2, a female parrot (ಹೆಣ್ಣುಗಿಣಿ Ss.; ಹೆಣ್ಣುಗಿಳಿ Kk. 24). [ಪಿರಿದುಂ ಗಿಳಿಪುತ್ತುಮಿರ್ಪಳಂ ಸಾರಿಕೆ ಯೆಮ್ಬರಲ್ಲದಭಿಸಾರಿಕೆಯೆಮ್ಬರೆ Pb. 4, 83]. 3, a virtuous, chaste woman (ಕುಲನಾರಿ, ಪತಿವ್ರತೆ Mr. 305). 4, a piece or man at chess or backgammon; chess-playing. ತೊಣ್ಣುಗೆಡೆದ ಶುಕ ಸಾರಿಕೆ (Śmd. 24).

**ಸಾರಿಗಿ sārigi.** = ಸಾರಿ. a going or coming, etc. (B. 5, 139. 148).

**ಸಾರಿಗೆ sārige.** = ಸಾರೆ 1 No. 1. proximity, etc. (Si. 165; *only* in Si.). 2, a complex: a piece of land. 3, communication.

**ಸಾರಿತ sārita.** caused to go, pushed, etc. see ಅಪ-.

**ಸಾರಿದ sārida.** Tbh. of ಶಾರಿದ. (Śmd. 335 Mdb., o. r. ಶಾರಿದ = ಸಾರಿದ).

**ಸಾರಿರ sārira.** Tbh. of ಶಾರೀರ No. 3. gutteral sound. (Bp. 19, 10).

**ಸಾರಿವೆ sārive.** the creeper Ichnocarpus frutescens R. Br. (used as a substitute for Sarsaparilla).

**ಸಾರಿಸು sārisu.** = ಸಾರಯ್ಸು. = ಸಾರ್ಚು No. 1. see Rām. 6, 55, 11. to smear (the ground, etc. of a house with a wash of cow-dung), to smooth, to clean (C.; Bp. 18, 34; 38, 10; 60, 4; B. 5, 135. 285; Mhr. ಸಾರವಿಕೇಂ). ಸಾರಿಸಿದಂ (Śmd. 260). ಸಾರಿಸೋಣ (ಸಮ್ಮಾರ್ಜನ G.). ಆರೋಗ್ಯರಕ್ಷಣಕ್ಕಾಗಿ ನಾವು ಇರುವ ಮನೆ ಆಗಾಗ್ಗೆ ಉಡಿಗಿ ಸಾರಿಸಿ ನಿರ್ಮಲ ಮಾಡಬೇಕು (B. 4, 25).

**ಸಾರೀರ sārīra.** Tbh. of ಶಾರೀರ. corporeal, etc. (Śmd. 335).

**ಸಾರು sāru.** = ಸಾರ್ 1, q. v. to approach, etc. P. p. ಸಾರಿ, once ಸಾರಿದು (Bh. 1, 14, 20). 3rd person future ಸಾರುಗುಂ (Śm. 29. 91). ಮಱಿಯ ಸಾರಿ ಬಹ ಗಾಳಿ (ಝಂಝಾನಿಲ Mr. 50); ಊರ ಸಾರಿ ಇರ್ದ ವನಂ (ಆರಾಮ 152). see Bp. 26, 31; 28, 24; 60, 46; Rśv. 9, 23; Rām. 2, 7, 3; 3, 2, 14. 15. 23; Bh. 1, 10, 29; Dp. 172, 5.

**ಸಾರೂಪ್ಯ sārūpya.** (fr. ಸರೂಪ 1). sameness or similarity of form, resemblance, conformity; assimilation to or conformity with the deity. (Grj. 3, 69 va.; Bp. 1, 31; Rśv. 11, 67; J. 9, 13).

**ಸಾರೂಪ್ಯಪದ sārūpya-pada.** the state of being assimilated to the deity (Bp. 44, 32).

**ಸಾರೆ sāre. 1.** being near, nearness, proximity; union (Bp. 50, 9; 51, 74; V. 4, 105; 9, 87). [ಸಾರೆಯೊಳಿಪ್ಪ ಮಹಾದ್ವಿಜ ನಾರಿಯ ಮುಮುತಾ ವಿಪ್ರೂರಿತೋರ್ಜಿತ ರವದಿಂ Pb. 3, 24]. 2, = ಸಾರಿ, a time, a turn (B. 3, 75; 4, 43. 165. 202. 224; 5, 53. 268). [— ಸಾರಿರು. to be near. ಸಾರಿದ್ದವರ ದೂರದವರೆನ್ದು ಬೇಱೆ ಮಾಡಿದರೆ ಕೂಡಲಸಂಗಮದೇವ ಸಿಂಗಾರದ ಮೂಗ ಹಲುದೋಱಿ ಕೊಯ್ಯದೆ ಮಾಣ್ಬನೆ? Bv. 414]. — ಸಾರೆಯಾಗು. -ಆಗು. to become near, to approach (Bh. 3, 16, 13); [ಎಳೆಯೊಳ್ ತೋಱುವ ರೂಪನಾಗಳೆ ನಭೋ ಭಾಗಾಗ್ರದೊಳ್ ತೋರ್ಪನಾಗಳೆ ಗೆಣ್ಬಾಗಳೆ ಸಾರೆಯಾಗಿ ಪೊಳೆವಂ Ap. 7, 121]. to be united (Ch. v. 136). — ಸಾರೆವರ್. -ಬರ್. to come near, to approach (Abh. P. 5, 78; 14, 65 va.; Rśv. 5, 55 va. twice). [ನೋಟಕರ್ ತಳವೆಳಗಾಗೆ ಸಾರೆವರೆ ನೀರದ ಮಾರ್ಗದಿನನ್ದು ನಾರದಂ Pb. 6, 6; Ap. 8, 8 va.].

**ಸಾರೆ sāre. 2.** = ಸೆರೆ, ಸೇರೆ. the palm of the hand bent so as to receive or hold anything (My.). ಸತ್ತ ಮಗುವಿನ ಕಣ್ಣು ಸಾರೆ (Prv.). see ಒಚ್ಚಾರೆ.

**ಸಾರೆಟ್ sāreṭ.** = ಸಾರಟ್, etc. a chariot, etc. (Si. 275).

**ಸಾರೋಟ್ sārōṭ.** = ಸಾರೆಟ್, etc. (My.).

**ಸಾರೋಷ್ಟ್ರಿಕ sārōṣṭrika.** = ಸೌರಾಷ್ಟ್ರಿಕ. a kind of snake, etc. (Colebr.).

**ಸಾಱಿಸು sāṟisu.** to cause to proclaim aloud, etc. (Bp. 44, 70; 51, 70; J. 7, 1. 31; 8, 3; 10, 47; 15, 49. 50; C.; see ಡಂಗುರ-).

**ಸಾಱು sāṟu. (ಸಾಱ್). 1.** to cry out, to proclaim aloud, to publish (ಘೋಷಣ Śmd. Dh.; C.; T., M. ಚಾಱು; Te. ಚಾಟು; *cf.* ತಾಱ್ 2). P. p. ಸಾಱಿ (Cpr. 6, 82). [ಪಗೆ ಸಾಱು ವುದುಂ ಕೊಲ್ಲೆಂ Pb. 5, 100; Kr. 1, 134; Ap. 11, 68]. ಗಣ್ಡೆಯ ಬಾಱಿಸಿ ಸಾಱುವವನು (ಚಕ್ರಿಕ, ಘಾಣ್ಟಿಕ Nr.). ಸಾಱುತಿರ್ದಳು ಸಕಲಸೊಬಗನು (Prll. 3, 31). ಸಾಱಿ ಕೊನ್ದರೆ ಪಾಪವಿಲ್ಲ (Prv.). see Bp. 36, 28; 56, 24; J. 2, 62; 24, 63; 25, 44; 31, 75. — ಸಾಱು ಸಾಱು. rep. (Bp. 22, 22).

**ಸಾಱು sāṟu. (ಸಾಱ್). 2.** = ಸಾರ್ 2–. a relish in a liquid state, well-seasoned sauce, broth, pepper-water (ರಸಾದ್ರ Śmd. Dh.; My.; Tu., T., M. ಚಾಱು; Te. ಚೇರು). ಸಾಱು ಚನ್ನಾಗಿದೆ, ನೀರು ಮಾತ್ರ ಹೆಚ್ಚಾಯಿತು. — ಅಡಿಗೇ ಗುಣ ಸಾಱಿನಲ್ಲಿ ನೋಡು, ಮಡಿಗೇ ಗುಣ ಫಲದಲ್ಲಿ ನೋಡು. — ಹುರುಳೀ ಸಾಱಿಗೆ ಹೋಗಿ, ಕುದುರೇ ಕ್ರಯ ಕೇಳಿದ ಹಾಗೆ. — ಹುಳೀ ಸಾಱು ಮಾಡ ದವ ನಳಪಾಕ ಮಾಡ್ಯಾನೇ? — ಬೇಳೇ ಸಾಱಾದರೆ ಬೋಱಿಗೆ ಆಗದೇ? (Prvs.).

**ಸಾಱುಹ sāṟuha.** proclaiming aloud, etc. ಸಾಱುಹವು (ಘೋಷಕ Nr.).

**ಸಾರ್- sār. 1.** = ಸಾರ್ 2. — ಸಾರ್ತರ್. to approach (ಸಮೀಪಾಗ ಮನ Śmd. Dh.; Cpr. 2, 93; 6, 69 va.; 7, 17; Abh. P. 13, 45. 102; Grj. 3, 19). [ಮುನಿ ವೀತರಾಗನೆನ್ದುಂ ಬನಮಂ ಸಾರ್ತರ್ಕ್ಕುಂ Kr. 1, 79; Pb. 8, 2; Ap. 5, 46].

**ಸಾರ್- sār. 2.** = ಸಾಱು 2. ಸಾಗರಳ್ (J. 6, 44).

**ಸಾರ್ಕೆ sārke.** approach: nearness, proximity (ಅಣಿ Ct. I, 37; Rśv. 5, 52 va.). [ನೀರ್ ಪೊರ್ಕುಱಿಯೊಳ್ ಜೋಲ್ದುಳ್ಳುಡೆ ಸಾರ್ಕೆಯೊಳೇಂ ನೃಪನ ಮನಮನಳವಡಿಸಿದುದೋ Ap. 11, 149]. — ಸಾರ್ಕೆ ವರ್. -ಬರ್. to come near, to approach (Śsv. 2, 9).

**ಸಾರ್ಚು sārcu.** to make oneself to come or go near or to: to go near, to approach (Cpr. 7, 69; J. 28, 45). 2, to make go or come near or to; to apply to, to put to, on or in, to put (Abh. P. 13, 90; Grj. 10, 61 va.; Rśv. 5, 73. 92; 6, 9; 6, 11 va.; 14, 29; J. 5, 11; 14, 26; 18, 21; see ಮೆಯ್-). [ಕೆಲದ ಲತೆಯ ಮೇಲೆಯೊಳ್ ಬಿಲ್ಲುಮಮ್ಬುಮಂ ಸಾರ್ಚಿ ಕೊಳಗಂ ಪೊಕ್ಕು Pb. 8, 38 va.; Ap. 4, 18 va.].

**ಸಾರ್ಥ sa-artha.** having an object; having meaning, significant, important; serving a purpose, useful, serviceable; of like meaning or purport; having property, opulent, wealthy. 2, a wealthy man. 3, a company of traders, a caravan; 4, *a multitude of similar animals, a troop*, a multitude in general.

**ಸಾರ್ಥಕ sa-arthaka.** full of meaning, important; serviceable, useful, advantageous; fruitful, yielding fruit (My.).

**ಸಾರ್ಥಕತೆ sa-arthakate.** the state of being adapted to any purpose, useful, etc., etc. (My.).

**ಸಾರ್ಥಕ್ಯ sa-arthakya.** completion, fulfilment; the use or end proper to the product (Mhr.; B. 5, 177).

**ಸಾರ್ಥತೆ sa-arthate.** the state of being full of meaning, the fullness of meaning; the state of being opulent (Cpr. 3, 11; 4, 20).

**ಸಾರ್ಥವಾಹ sārtha-vāha.** *the leader of a caravan; a merchant.*

**ಸಾರ್ಥಿಕ್ಯ sa-arthikya.** = ಸಾರ್ಥಕತೆ. (My.).

**ಸಾರ್ದ್ರ sa-ārdra.** *wet, moist, damp.*

**ಸಾರ್ದ್ರತ್ವ sa-ārdratva.** wetness, etc. see ತೊಯಲ್.

**ಸಾರ್ಧ sa-ardha.** joined with a half, plus one half, and a half. ಸಾರ್ಧಂ, *with, along with, together with* (ಕೂಟ Mr. 535).

**ಸಾರ್ಪಿಷ sārpiṣa.** (fr. ಸರ್ಪಿಸ್). *containing ghee, cooked with ghee, dressed with ghee* (ತುಪ್ಪದಲ್ಲಿ ಕಲಸಿದವು Mr. 216).

**ಸಾರ್ವ sārva.** (fr. ಸರ್ವ). relating to all, general, universal; fit for all. (J. 5, 49).

**ಸಾರ್ವಕಾಲ sārvakāla.** (fr. ಸರ್ವಕಾಲ). taking place at all times, suitable for all seasons. ಸಾರ್ವಕಾಲಂ, continually (J. 5, 49).

**ಸಾರ್ವಕಾಲಿಕ sārvakālika.** (fr. ಸರ್ವಕಾಲ). belonging to all times, suited to all seasons, everlasting. (Cpr. 9, 93; Si. 385).

**ಸಾರ್ವಜನೀನ sārvajanīna.** (fr. ಸರ್ವಜನ). relating or belonging or suited to all men, universal, public. (My.).

**ಸಾರ್ವತ್ರಿಕ sārvatrika.** (fr. ಸರ್ವತ್ರ). belonging to every place, universal, general, suited to all places or circumstances. (My.; B. 4, 87).

**ಸಾರ್ವಭೌಮ sārvabhauma.** (fr. ಸರ್ವಭೂಮಿ). relating to or consisting of the whole earth, comprising the whole world, known throughout the world. 2, *a universal monarch, an emperor,* 3, N. of the elephant of Kubēra.

**ಸಾರ್ವಭೌಮಕ sarvabhaumaka.** an emperor (J. 26, 53), a governor general, a leader (Rām. 4, 2, 24).

**ಸಾರ್ವಲೌಕಿಕ sārvalaukika.** (fr. ಸರ್ವಲೋಕ). prevailing throughout the whole world, common to all the world, known by every one, universal. (R.).

**ಸಾರ್ವೈಕಾದಶಿ sārva-ēkādaśi.** the ēkādaśi of the dark half of the month jyēṣṭhā (My.).

**ಸಾರ್ಷ್ಟಿತೆ sārṣṭite.** equality in rank or condition, equality in power, etc. see s. ಸಿದ್ಧ No. 22.

**ಸಾಲ್ sāl. 1.** = (ಸಲ್ 1), ಸಾಲು 1. to be joined or bound to, to become indebted, to be placed under a debt, to be obliged or under obligation (ಋಣ Śmd. Dh.); to be required, fit or proper (ಸಲುವಳಿಯಾಗು Śmd. 97; Cpr. 2, 46. 54; Abh. P. 9, 177. 191; Rśv. 13, 15; J. 5, 60; 18, 21). P. p. ಸಾಲ್ದು. 2, to be all that is required, to be sufficient or enough, to suffice (Bp. 8, 23. 24; 59, 11; J. 9, 33; 23, 28; 26, 26; see ಸಾಕು 3; Tu. ಇತಾರು; T., M., Te. ಚಾಲು). [ಅಧೀಶ್ವರನಾ ದಯೆ ಸಾಲ್ಗುಂ Kr. 1, 115; ಮುಕ್ಕುಳಿಸಲ್ಕುಮ್ಬುಧಿ ಸಾಲ್ದುದಿಲ್ಲ Pb. 4, 20; Ap. 3, 64].

**ಸಾಲ್ sāl. 2.** = ಸಾಲು 2. (a joining, *i. e.*) a continuous line, a row; a furrow; a mass, a multitude (ಪಂಕ್ತಿ, ಆಲಿ Nr.; ಸಸ್ಯಪಂಕ್ತಿ Śmd. Dh., ಆಲಿ, ಪಂಕ್ತಿ Nn. 138, o. r. ಸಮೂಹ; ತೆರಳ್ಕೆ, ಥಟ್ಟು, ಕದಲೆ, ಸನ್ತೆ, etc., ಶ್ರೇಣಿಕೆ Kk. 17; ಗೊನ್ದಣೆ, etc., ಶ್ರೇಣಿಕೆ Śm. 54; ಸೇಣಿ, etc., ಸಮೂಹ Śs.; ಕೇಟು Śm. 107. 114; Tu.; T., M. ಚಾಲ್; Te. ಚಾಲು). ಸಾಲ್ಗಳ್ (Cpr. 1, 101 va.; C. Bp. 42, 13), see Bp. 61, 30; C. Bp. 5, 48; 42, 14; J. 3, 7. 17. 21. 26; 7, 3; 12, 8; 17, 6; ಮುಚ್ಚಾಲ್. — ಸಾಲಿಡು. -ಇಡು. to form a line, to go or come in rows, to come uninterruptedly one after another; to form a mass; to amass (Abh. P. 9, 69; Grj. 2, 108 va.; Rśv. 5, 116; 6, 11 va.; 6, 36; Śśv. 4, 42; Rām. 6, 12, 26). — ಸಾಲ್ಗೊಳ್. -ಕೊಳ್. to form a line, to be in rows; to form a mass or multitude, to be amassed (Rśv. 2, 36; 5, 19 va.; 10, 31 va.; J. 21, 14). — ಸಾಲ್ಗೊಳಿಸು. -ಕೊಳಿಸು. to cause to form a row, to put in rows, to put one after the other (Rśv. 8, 3; J. 23, 60; B. 4, 209). — ಸಾಲ್ದಳೆ. -ತಳೆ. = ಸಾಲ್ಗೊಳ್. (J. 3, 17). — ಸಾಲ್ದೆಗೆ. -ತೆಗೆ. to form a row; to form a mass or multitude (Grj. 4, 68). — ಸಾಲ್ವಲೆ. -ಬಲೆ. a kind of net (Śśv. 3, 24). — ಸಾಲ್ಪಿಡಿ. -ಹಿಡಿ. = ಸಾಲ್ಗೊಳ್. (Bp. 26, 41; Rśv. 6, 9; 13, 77 va.; 13, 92). — ಸಾಲ್ಮರಿ. a kind of rain (Rśv. 8, 112).

**ಸಾಲ್ sāl.** = ಸಾಲು, ಸಾಲೆ 5. a year (My.; Br.; Mhr., H. ಸಾಲ). — ಸಾಲ್ ಆಖೈರು. the end of a year (My.). — ಸಾಲ್ ಬಸಾಲ್. every year (My.). — ಸಾಲ್ ಮಜಕೂರು. the present year (My.). — ಸಾಲ್ ವಾರ್. annual (My.).

**ಸಾಲ sāla.** debt (of money, cloth, grain, etc.; ಅಪಮಿತ್ಯಕ, ಉದ್ಧಾರ, ಋಣ, ಪಯುರ್ದಂಚನ Hlā.; ಋಣ Nr.; ಅಭಿಷಂಗ, ರಿಣ Nn. 122; ಋಣ, ಅಪಮಿತ್ಯಕ, ಉದ್ಧಾರ Mr. 346; ಋಣ, ಪಯುರ್ದಂಚನ, ಉದ್ಧಾರ, ಕಡ Si. 299; C.). [Tu. ಸಾಲೊ]. ಸಾಲ ತಲೇ ಹೋಚಿ, ಬಡ್ಡಿ ಬಣ್ಡೀ ಹೋಚಿ. — ಸಾಲವೋ? ಶೂಲವೋ? — ನಿನ್ನ ಸಾಲಕ್ಕೆ ನನ್ನ ಹಲಸಿನ ಹಣ್ಣು. — ಪತ್ರಿಯಿಲ್ಲದ ಪೂಜೆ, ಪತ್ರವಿಲ್ಲದ ಸಾಲ. — ಸಾವಿರ ತನಕ ಸಾಲ; ಆ ಮೇಲೆ ಲೋಲ (Prvs.). ಆಲಕ್ಕೆ ಹೂವಿಲ್ಲ, ಸಾಲಕ್ಕೆ ಕೊನೆಯಿಲ್ಲ, ಜಾಲಿಯ ಗಿಡಕ್ಕೆ ಗನ್ಧಿಲ್ಲ; ದೇವರು ಸೂಳೆಗಿಲ್ಲ (Sp.). see Bp. 23, 38; 26, 61; Prv. s. ಲೋಲ. — ಸಾಲ ಕೇಳು. to ask for a loan (My.); to require payment of a debt, to call in a debt (My.). ಸಾಲ ಕೇಳದೆ ಹೋಯಿತು, ಹೊಲ ನೋಡದೆ ಹೋಯಿತು (Prv.). — ಸಾಲ ಕೊಡು. to lend (My.; Bp. 60, 17; B. 5, 98); to pay a debt (Bp. 42, 13). ಸಾಲವ ಕೊಡುವವನು (ಉತ್ತಮರ್ಣ Nr.). ಸಾಲ ಕೊಟ್ಟವನು (ಉತ್ತಮರ್ಣ Si. 300). ಕೊಟ್ಟ ಸಾಲವ ಕೇಳ ಹೊತ್ತನಱಿಯ, ಕಟ್ಟೆ ತುಂಬಿದ ಮೇಲೆ ಚಣಮಾತ್ರವಿರ್ ಇರಲಿಲ್ಲ (Dp. 4). — ಸಾಲ ಕೊಳ್ಳು. to borrow (Dp. 60, 17). ಸಾಲವ ಕೊಮ್ಬುವನು (ಅಧಮರ್ಣ Nr.). 2, to receive a loan. ನಮ್ಬಿಗೆ ಯುಳ್ಳವ ತಾ ಕೊಮ್ಬುವನು ಸಾಲವನು; ನಮ್ಬಿಗೆ ಕೆಟ್ಟ ಬಱಿಕ ಬೆನ್ನಾವಿಗೆಯ ಕುಮ್ಬುದನ್ತಿಹನು (Sp.). — ಸಾಲ ತಿದ್ದು. to pay a debt (Dp. 24, 2; Bp. 42, 18). see Prv. s. ಸಾಲ ಮಾಡು. — ಸಾಲ ತೀರಿಸು. to discharge a debt (My.; B. 5, 111). ಸಾಲ ತೀರಿಸುವಿಕೆ (ನಿರ್ಯಾತನ Si. 437). see Prv. s. ಸಾಲ ಮಾಡು. — ಸಾಲ ತೀರು. a debt to be discharged. ಜೋಲುವವನ ಕಾಲು ಹಿಡಿದರೆ ಸಾಲ ತೀರೀತೇ? (Prv.). — ಸಾಲ ತೆಗದು ಕೊಳ್ಳು. to contract debt, to borrow (My.). ಸಾಲ ತೆಗದು ಕೊಣ್ಡವನು (ಅಧಮರ್ಣ Si. 300). — ಸಾಲದ ಮನುಷ್ಯ. = ಸಾಲದವ. (ಋಣದ ನರ Śmd. 232 Cm.). — ಸಾಲದವ. -ಅವ. a debtor (My.); a creditor (My.). ಸಾಲದವನ ಮುನ್ದೆ ಇರು, ಅರಮನೆಯ ಹಿನ್ದೆ ಇರು (Prv.). — ಸಾಲ ಬಿಡು. to grant quittance of a debt, to quit a debt (of money or goods, My.). — ಸಾಲ ಬೀಱು. to get into debt (My.); a debt to come upon (one, My.). — ಸಾಲ ಮಾಡು. to contract debt, to borrow (My.). ಸಾಲ ಮಾಡಿ, ಓಲೆ ಮಾಡಿದ; ಓಲೆ ಮಾಡಿ, ಬಡ್ಡಿಗೆ ಹೋಯಿತು. — ದ್ರವ್ಯವಿದ್ದವನು ತಿನ್ದು ಸಾಯಲಿಲ್ಲ, ಸಾಲಾ ಮಾಡಿದವ ತಿದ್ದಿ ಸಾಯಲಿಲ್ಲ. — ಸಾಲಾ ಮಾಡಿದವ ತೀರಿಸಿ ಸಾಯಲಿಲ್ಲ, ಮೂಲಾ ಮಾಡಿದವ ಉಣ್ಡು ಸಾಯಲಿಲ್ಲ (Prvs.). — ಸಾಲ ಮುಟ್ಟಿಸು. to pay a debt (B. 5, 112). — ಸಾಲ ಮುಟ್ಟು. dupl. ಸಾಲ ಮುಟ್ಟಲ್ಲದಾಕೆ ಮೂಱು ಮನೆ ತಿರುಗಿದಳು (Prv.). — ಸಾಲ ಸಲ್ಲು. a debt to be discharged (My.). ಸಾಲ ಸಲ್ಲದಿದ್ದರೆ ಹಾಲು ಕಹಿ ಆದೀತೇ? (Prv.). — ಸಾಲ ಸೋಲ. = ಸಾಲ

ಮುಟ್ಟು. (My.). — ಸಾಲ ಹರಿ. a debt to be discharged (My.; B. 5, 222). — ಸಾಲ ಹರಿಸು. to discharge a debt (My.).

**ಸಾಲ sāla. 1.** = ಶಾಲ 2. *the timber tree Vatica robusta* W. & A.; its resin; etc.

**ಸಾಲ sāla. 2.** (fr. ಸಾಲೆ 1). a man who has a room or shop. see ಅಕ-, etc.

**ಸಾಲಗಾತಿ sāla-gāti.** = ಸಾಲಗಾರ್ತಿ. (My.).

**ಸಾಲಗಾಱ sāla-gāṟa.** a creditor (My.); a debtor (My.). ಸಾಲಗಾಱನ ಮನೆಗೆ ಸವದೆ ಹೊತ್ತರೆ ಮೇಲಣ ಬಡ್ಡಿಗೆ ಸಮವಾಯಿತು. — ಪೇಟೆಗೆ ಹೋದರೆ ಸಾಲಗಾಱರ ಕಾಟ, ಮನೆಗೆ ಬನ್ದರೆ ಹೆಣ್ಡತಿಯ ಕಾಟ (Prvs.).

**ಸಾಲಗಾರ್ತಿ sāla-gāṟti.** a female creditor (My.); a female debtor (My.).

**ಸಾಲಗ್ರಾಮ sāla-grāma.** = ಶಾಲಗ್ರಾಮ, etc. a black stone chiefly found in the river Gaṇḍaki and worshipped as sacred to Viṣṇu. (Rām. 5, 8, 69; J. 26, 46; 28, 24. 32. 34; 31, 78. 79; see ಪುಟ್ಟ-). 2, N. of a place of pilgrimage in Mysore (My.).

**ಸಾಲಂಕಾರ sa-alaṅkāra.** together with ornaments, adorned with jewels and trinkets (J. 2, 27); the state of being so adorned (Rām. 6, 39, 7).

**ಸಾಲಂಕಾರಕನ್ಯಾದಾನ sālaṅkāra-kanyā-dāna.** the giving away in marriage of the female adorned with jewels and trinkets (My.; Mhr.).

**ಸಾಲಂಕೃತಕನ್ಯಾದಾನ sa-alaṅkṛita-kanyādāna.** = ಸಾಲಂಕಾರ ಕನ್ಯಾದಾನ. (My.).

**ಸಾಲಂಗುಳಿ sāla-ṅ-guḷi.** (Śmd. 238). a person who is wont to contract debt.

**ಸಾಲಣ sālaṇa.** Tbh. of ಶಾಲಣ. (Śmd. 335)?.

**ಸಾಲಪರ್ಣಿ sāla-parṇi.** = ಶಾಲಪರ್ಣಿ. a kind of shrub. (ವನಸ್ಪತಿ, ಗಿಡಮೂಲಿಕೆ G.).

**ಸಾಲಬಡಕ sālabaḍaka. -ಪಡಗ.** = ಸಾಲವಣಿಗ. (S. Mhr.).

**ಸಾಲಭಂಜಿಕೆ sāla-bhañjike.** = ಶಾಲಭಂಜಿಕೆ. a doll, etc. (ಗೊಮ್ಬೆ G.).

**ಸಾಲವಣಿಗ sāla-vaṇiga.** (Śmd. 242). a man who contracts debt.

**ಸಾಲಶೃಂಗ sāla-śṛiṅga.** the coping of a wall. (ಕೊತ್ತಲ, ಹೂಡೆ G.).

**ಸಾಲಾ sālā.** salep.

**ಸಾಲಾಮಿಸಿರಿ sālā-misiri.** = ಸಾಲಾಮಿಸ್ರಿ. (My.).

**ಸಾಲಾಮಿಸ್ರಿ sālā-misri.** salep of Misr or Egypt: salep, the tubers of several species of Orchis, especially Orchis mascula L. (My.; Te., M.; St. & Pl.; Si. 151; Mhr. ಸಾಲ ಮಿಶ್ರೀ).

**ಸಾಲಾವಳಿ sālāvaḷi.** = ಸಲುವಳಿ. fitness, suitableness (My.).

**ಸಾಲಾವೃಕ sālā-vṛika.** = ಶಾಲಾವೃಕ. *a dog.* 2, *a jackal.* 3, *an ape.*

**ಸಾಲಿ sāli.** Tbh. of ಸಾಲೆ 3. a room, hall, etc. (S. Mhr.). ಅಡಿಗೆ ಸಾಲಿಗೆ ಅಧಿಕಾರಿ ಆದವನು (ಪೌರೋಗವ Si. 304).

**ಸಾಲಿಕೆ sālike.** business in a room or shop. see ಅಕ-, etc.

**ಸಾಲಿಗ sāla-iga.** (Śmd. 233). a debtor (ಋಣಿ 232; ಅಧಮರ್ಣ G.; My.). 2, a creditor (My.). ಸಾಲಿಗಾರ್ ಕಲುಗುಣ್ಡಂ ಮಿಗೆ ಪೇಱುವರ್ (Ss.). ಸಾಲವನು ತರುವಾಗ ಹಾಲು ಬೋನುಣ್ಡನ್ತೆ; ಸಾಲಿಗನು ಬನ್ದು ಕೇಳಿದರೆ ಕುಣ್ಡೆಗೆ ಚೇಳು ಕಡಿದನ್ತೆ (Sp.). ಸಾಲವನು ಕೊಮ್ಬಾಗ ಹಾಲೋಗರುಣ್ಡನ್ತೆ; ಸಾಲಿಗನು ಬನ್ದು ಎಳೆವಾಗ ಕಿಬ್ಬದಿಯ ಕೀಲು ಮುಱಿದನ್ತೆ (Sp.). ಬೆಣ್ಡರದೆ ಮುಟುಗಿದರು (*i. e.* -ರೂ) ಗುಣ್ಡೆದ್ದು ತೇಲಿದರು (*i. e.* -ರೂ) ಬಣ್ಡೆಯ ನೊಗವು ಚಿಗತರು (*i. e.* -ರೂ) ಸಾಲಿಗನು ಕೊಣ್ಡದ್ದು ಕೊಡನು (Sp.).

**ಸಾಲಿಗ sāliga. 1.** (fr. ಸಾಲೆ 2). a weaver (ತನ್ತುವಾಯ, ಕುವಿನ್ದಕ Hlā.). [ಕಾಸಿ ಕಮ್ಮಾಱನಾದ, ಬೀಸಿ ಮಡಿವಾಳನಾದ; ಹಾಸನಿಕ್ಕಿ ಸಾಲಿಗನಾದ Bv. 589].

**ಸಾಲಿಗ sāliga. 2.** a man who has a room or shop. see ಅಕ-, etc.

**ಸಾಲಿಗ್ರಾಮ sāligrāma.** = ಸಾಲಗ್ರಾಮ. (My.; Mhr. ಶಾಲಿ-; see Prv. s. ತಾಟ[3]).

**ಸಾಲಿಗ್ರಾವ sāligrāva.** = ಸಾಲಿಗ್ರಾಮ. (G.).

**ಸಾಲಿತಿ sāliti.** a woman who belongs to a man that has a shop or room. see ಅಕ್ಕ-.

**ಸಾಲು sālu. 1.** = ಸಾಲ್ 1 No. 2 (without a P. p.). to be sufficient, etc. (C.). ಕನ್ನಡದ ನುಡಿಯಲಿ ತಿಳಿದು, ತನ್ನೊಳು ತನ್ನ ಮೋಕ್ಷವ ಗಱಿಸಿ ಕೊಣ್ಡರೆ ಸಾಲದೇ? ಸಂಸ್ಕೃತದಲಿನ್ನೇನು? (Abhā. 1, 5). ಯಾತಱದು ಹೂವೇನು? ನಾತರದು ಸಾಲದೇ? (Sp.). ಉದ್ದ ಸಾಲದ ಕುಳ್ಳನು, (ವಾಮನ, etc. Si. 197); ಅವಕಾಶ ಸಾಲದೇ ಇರುವದು (376); ಬುದ್ಧಿ ಸಾಲದದು (ಅಪ್ರತಿಭ, ಶಾರದ 431). ಎಲ್ಲರಿಗೂ ಸಾಲುವಷ್ಟು ಹೊರಡುವದಿಲ್ಲ (B. 4, 221). ನಮ್ಮ ಹೊಟ್ಟೆಗೆ ಸಾಲದ ಹಾಗಿದೆ (B. 5, 186).

**ಸಾಲು sālu. 2.** = ಸಾಲ್ 2. a line, etc. (ಸೀತೆ Mr. 371; ವೀಥಿ, ಆಲಿ, ಆವಲಿ, ಪಂಕ್ತಿ, ಶ್ರೇಣಿ Si. 119; Bp. 28, 46; 60, 19; Rām. 1, 13, 2; C.). ನೇಗಿಲ ಸಾಲು (ಸೀತೆ, ಲಾಂಗಲಪದ್ಧತಿ Hlā.; Nr.). ರೇಖೆ, ರಾಜಿ ಎನ್ದೊಡೆ ಎಡೆದೆಱು ಇಲ್ಲದ ಸಾಲು; ವೃಕ್ಷಾದಿಗಳ ಸಾಲಿನ ಮಧ್ಯಮ್ ಎನ್ದೂ, ಎಬ್ಬರು (Nr.). see Si. 284. 301. 302. 303. — ಸಾಲುಗಟ್ಟು. -ಕಟ್ಟು. to form a line or row (Bp. 22, 6). — ಸಾಲುಗೊಳ್. -ಕೊಳ್. = ಸಾಲ್ಗೊಳ್. (Bp. 26, 41; B. 2, 9; 4, 54. 83). — ಸಾಲುತೋಪು. a row of trees (along roads, My.). — ಸಾಲುದಲೆ. -ತಲೆ. a mass of heads (Rām. 3, 6, 10). — ಸಾಲು ಮರ. = ಸಾಲುತೋಪು. (My.).

**ಸಾಲು sālu.** = ಸಾಲ್, etc. — ಸಾಲುಗುಜಸ್ತಾ. ಸಾಲುಗುದಸ್ತಾ. the past year (My.; Mhr.).

**ಸಾಲೆ sāle. 1.** see ಬೆವರು ಸಾಲೆ. (Mhr., H. ಸಾಲ, bark, rind; husk; the skin, of man or beast, as rubbed off; the dried rind of the mangosteen. is ಸಾರ to be compared?).

**ಸಾಲೆ sāle. 2.** = ಶಾಲೆ 2, ಸೇಲೆ, etc. Tbh. of ಚೇಲ (*cf.* ಜಾಡ). cloth, etc. — ಸಾಲೆಯ. -ಅ 3. a weaver (ಕುವಿನ್ದಕ Mr. 377, o. r. ಸಾಳೆಯ). — ಸಾಲೆಯವ. -ಅವ. a weaver (especially of coloured cloth, My.). — ಸಾಲೆರೋಗ. = ಶಾಲೆರೋಗ, q. v. (My.). — ಸಾಲೆ ಹುಳ. a spider (ಊತೆ, ತನ್ತುವಾಯ, etc. Si. 171; Te. ಸಾಲೆ = K. ಸಾಲೆಯ).

**ಸಾಲೆ sāle. 3.** ಸಾಲಾ. = ಶಾಲೆ 1, ಸಾಲಿ. (Sk.; Tbh. of ಶಾಲೆ Śmd. 335). a hall, a room, etc.; a school (C.; B. 1, 7; 5, 274). [ಅನೇಕ ರತ್ನರಚಿತಮಾಗೆ ಮಾಡಿಸಿ ಸಯಮ್ಬರ ಸಾಲೆಯುಂ Pb. 3, 40]. ಸಾಲೆಯಿಲ್ಲದ ಊರು, ಮಾಲೆಯಿಲ್ಲದ ಪ್ರಸ್ತ ಗೋಲಿಯಾಡುವವರಾದರೂ ಮೇಲು ಅನ್ನಾರೇ? (Prv.). 2, a man who has a room or shop. see ಅಕ-, etc. — ಸಾಲೆಗೆ ಹಾಕು. to put to school (B. 5, 269. 274). — ಸಾಲೆ ಬರೆ. (*i. e.* ಸಾಲೆಯಲ್ಲಿ ಬರೆ). to write at school, (*i. e.* to study (B. 4, 195). — ಸಾಲೆ ಸ್ಥಾಪಿಸು. to establish a school (B. 5, 272. 302). — ಸಾಲೆ ಹಾಕಿಸು. to have a school put or established (B. 5, 188. 302). — ಸಾಲೆ ಹಾಕು. to put or establish a school (B. 5, 270).

**ಸಾಲೆ sāle.** 4. = ಸಾರಿ 2, etc. a chess-man. see ಲೆತ್ತ-.

**ಸಾಲೆ sāle.** 5. = ಸಾಲ್, etc. a year. — ಸಾಲೆ ಸಾಲ್[6]. yearly (My.; Mhr. ಸಾಲೋಸಾಲ). — ಸಾಲೆ ಹಾಲು. the present year (My.).

**ಸಾಲೆ sāle.** 6. Tbh. of ಶಾಲಿ 2. rice, paddy. see ಗಮ- (s. additions), ಜೀರಿಗೆ-.

**ಸಾಲೋಕ್ಯ salōkya.** (fr. ಸಲೋಕ). the state of being in the same sphere or world (with another), residence in the same heaven (with any particular deity). see Grj. 3, 69 va.; Bp. 1, 30.

**ಸಾಲ್ವ sālva.** N. of a demon-king who was slain by Krisna. (J. 7, 28; see ಅನು-).

**ಸಾಲ್ವಾನುಜ sālva-anuja.** Sālva's younger brother (J. 12, 36. 41).

**ಸಾಲ್ವಾವರಜ sālva-avaraja.** = ಸಾಲ್ವಾನುಜ. (J. 33, 24).

**ಸಾವ sāva.** present and future participle of ಸಾಯ್, frequently occurring instead of ಸಾಯ್ವ (Abh. P. 6, 72; Bp. 50, 55. 60; 58, 35; Bh. 1, 10, 29; J. 5, 54). ಸಾವಂ (Bp. 22, 18). ತನ್ನ ತಾ ಸಾವನಂ (ನಯಸೂಲಿಕ Mr. 237); ಮಕ್ಕಳು ಉಳಿ ಸಾವ ಸತಿ (ಭಿನ್ನ 303).

**ಸಾವಕಾತಿ sāvakāti.** a rich woman (My.).

**ಸಾವಕಾರ sāvakāra.** = ಸಾವುಕಾರ, ಸಾಹುಕಾರ. a banker, a merchant; a rich man (My.; B. 2, 17; 4, 169; Mhr., H.). ಸಾವಕಾರ ರಾದರೇನು? ಸಾವು ತಪ್ಪಿಸ್ಯಾರೋ? — ಹುಟ್ಟು ಕೋಲುಕಾಚನದು, ಕಟ್ಟು ಸಾವಕಾರನದು (Prvs.).

**ಸಾವಕಾರಕಿ sāvakāraki.** the business of a sāvakāra (B. 5, 92; Mhr.).

**ಸಾವಕಾರಿಕೆ sāvakārike.** = ಸಾವಕಾರಕಿ. (My.).

**ಸಾವಕಾಶ sa-avakāśa.** having leisure, leisurely, slow, soft, easy; leisure, spare time; an interval; slowness, easiness (C.; B. 3, 4. 23; ತಡ G.; M., Te.). ಸಾವಕಾಶಮಲ್ಲದು (ಅವಿಲಮ್ಬಿತ, etc. Si. 376).

**ಸಾವಕಾಶಗತಿ sāvakāśa-gati.** slow manner. ಸಾವಕಾಶಗತಿಯಾದ ವಿಲಮ್ಬಮಾನ (ವಿಲಮ್ಬಿತ Si. 63).

**ಸಾವಗಿಸು sāvagisu. 1.** to make straight, proper or nice (ಸಸಿನೆ ಮಾಳ್ಪುದು Ś.s.; Abh. P. 5, 49. 53; 7, 28. see ಸಯ್ 1). [ಸಾವಗಿಸುವ ಮೇಲುದಂ ಮೊಲೆಗಳ್ಳಿಱಯುತ್ತಿರೆ Pb. 8, 59; Ap. 2, 52].

**ಸಾವಗಿಸು sāvagisu. 2.** to cease, to become quiet or still, etc. (ಸಯ್ತು, ಮೌನಾರ್ಥಂ Kk. 49, o. r. ಸಾವನಿಸು; cf. ಜಾಗು 2).

**ಸಾವಧಾನ sa-avadhāna.** having attention, attentive, heedful, careful, cautious, wakeful; diligent; attention, carefulness, due heed; deliberation. (Bp. 43, 12; J. 27, 48; My.).

**ಸಾವಧ್ಯ sāvadhya.** (fr. ಸ-ವಧ). killing, slaughter (ಕರಣ, ಕೊಲೆ Nn. 108).

**ಸಾವನ್ತ sāvanta.** Tbh. of ಸಾಮನ್ತ. a leader, captain, etc. (Śmd. 128). see Bp. 5, 14; 9, 45; 59, 26.

**ಸಾವನ್ತಿ sāvanti.** = ಸಾಮನ್ತಿ, etc. a kind of jasmine. (My.). ಹಳದೀ ಸಾಮನ್ತಿ (ಹೇಮ ಪುಷ್ಪಿಕೆ Si. 139).

**ಸಾವನ್ತಿಗೆ sāvantige.** the garden-flower Chrysanthemum indicum Lin. (St. & Pl.; My.). — ಸಾವನ್ತಿಗೇ ಗಿಡ. (ಮಾಗಧಿ, etc. Si. 139).

**ಸಾವಯುವ sa-avayava.** composed of parts. 2, N. of a kind of rūpaka [Kr. 3, 15]; (Kāvy. III, 3, B, 81 seq.).

**ಸಾವರ sāvara.** = ಸಾವಿರ. (My.).

**ಸಾವರಿಸು sāvarisu.** to recover strength, to recruit one's spirits, to regather pristine vigour, power, etc. (ಚೇತರಿಸಿಕೊಳ್ಳು G.; Cb.; B. 3, 31; 5, 31; Mhr. ಸಾವರಣೇಂ).

**ಸಾವಾಸ sāvāsa.** Tbh. of ಸಹವಾಸ. (My.; G.).

**ಸಾವಾಸಿ sāvāsi.** Tbh. of ಸಹವಾಸಿ (Śmd. 379). a guard or attendant on the women's apartments (ಸೌವಿದ, ಸೌವಿದಲ್ಲ, ಸ್ಥಾಪತ್ಯ, ಕಂಚುಕಿ Hlā.; ಸೌವಿದ, ಸ್ಥಾಪತ್ಯ Mr. 266); a house-servant (Bp. 31, 12; 47, 35; 59, 28). 2, an ārya (ಆಯಸ Mr. 478; Nn. 106). 3, the state of living together. ಅಜ್ಜನ್ದು ಸಾವಾಸಿ (Śmd. II).

**ಸಾವಿ sāvi.** Tbh. of ಸ್ವಾಮಿ. lord, master, etc. (Śmd. 128; see ಗೋ-).

**ಸಾವಿಗೆ sāvige.** = ಶಾವಿಗೆ, ಸೇವಗೆ, etc. macaroni, vermicelli (of rice or wheat, C.; Si. 314; Mhr., H. ಶೇವಈ). ಹನುಮನ್ತರಾಯ ಹಗ್ಗ ತಿನ್ದರೆ ಪೂಜಾರಯ್ಯ ಸಾವಿಗೆ ಬಯಸಿದನನ್ತೆ (Prv.). — ಸಾವಿಗೆ ಪರಮಾನ್ನ. vermicelli of wheat fried and mixed with milk, sugar, etc. (My.). — ಸಾವಿಗೆ ಪಾಯಸ. = ಸಾವಿಗೆ ಪರಮಾನ್ನ. (My.; B. 2, 50). — ಸಾವಿಗೆಯೊರಳು. -ಒರಳು. a perforated machine for making vermicelli (My.).

**ಸಾವಿತ್ರ sāvitra.** (fr. ಸವಿತೃ). relating or belonging to the sun; descended from the sun; the sun; Śiva; etc. (Sk.; R.).

**ಸಾವಿತ್ರಿ sāvitrī.** a cluster of solar rays. 2, N. of a verse of the rigvēda, addressed to the sun, the gāyatrī (*i. e.* III, 62, 10). 3, N. of a wife of Brahmā. 4, N. of Umā (J. 31, 72). 5, N. of the wife of king Satyavat, daughter of Aśvapati, etc. 6, N. of a plant (ದೇವಪತ್ರ, ಗಾನ್ಧಾರಿ Mr. 132, o. r. ಸಾವಿತ್ರೆ).

**ಸಾವಿರ sāvira.** Tbh. of ಸಹಸ್ರ. [T. ಆಯಿರಂ; Tu. ಸಾರೊ]; (Bp. 28, 40; 30, 10; 39, 45; 50, 53; 51, 73; 60, 19; 61, 57; C.; B. 4, 209; 5, 225). a thousand. ಸಾವಿರವಂ (Bp. 40, 68). ಸಾವಿರದ (51, 66. 68). ಸಾವಿರಱುನೂರ್ಕಣ್ಡುಗ (10, 5). ಸಾವಿರ ಕುದುರೆಗೆ ಸರದಾರ ನಾದರೂ ಮನೆ ಹೆಣ್ಡತಿ ಕಾಸ್ತಾರ. — ಸಾವಿರ ಕೊಟ್ಟು, ಸನ್ತಾನ ಪಡೆಯ ಬೇಕು. — ಸಾವಿರ ತನಕ ಸಾಲ, ಆ ಮೇಲೆ ಲೋಲ. — ಸಾವಿರ ತೂಕ ಚಿನ್ನಕ್ಕೆ ಹಾಗ ತೂಕ ಮಚ್ಚು. — ಸಾವಿರ ಬೆಕ್ಕು ಕೂಡಿದರೆ ಒನ್ದು ಹುಲಿ ಆದೀತೇ? — ಸಾವಿರ ಬಾರಿ ಗೋವಿನ್ದ ಎನ್ನ ಬಹುದು, ಒಬ್ಬ ದಾಸಯ್ಯಗೆ ಭಿಕ್ಷೆ ನೀಡೋದು ಕಷ್ಟ. — ಸಾವಿರ ಹಾಱ ಹೋಯಿತು, ನೂಱು ಬೆರಸಿ ಬನ್ತು. — ಸಾವಿರ ಸುಳ್ಳು ಹೇಳಿ, ಒನ್ದು ಮದಿವೆ ಮಾಡು. — ಸಾವಿರಸುಳ್ಳನ ಮಗ ಕೋಟಿಸುಳ್ಳ. — ಸಾವಿರ ಸುತ್ತಿಗೆ ಒನ್ದೇ ಗಣ್ಟು. — ಸಾವಿರ ವರುಷ ವಾದರೂ ಸಾವು ತಪ್ಪದು, ನೂಱು ವರುಷವಾದರೂ ಬೇಱ ಆಗುವದು ತಪ್ಪದು (Prvs.). ಸಾವಿರ ದಣ್ಡನೊಡೆಯ (ಸಾಹಸ್ರಿ G.). — ಸಾವಿರಕಾಲು. a kind of innocent articulate with a great number of feet which appears after the first rains and rolls itself firmly up into a ball when touched (My.). — ಸಾವಿರ ಕೋಱಗಳುಳ್ಳ ಮಿಾನು. (ಸಹಸ್ರದಂಷ್ಟ್ರ, etc. Si. 87). — ಸಾವಿರ ದಾಡೆಯ ಮಿಾನ್. (ಸಹಸ್ರದಂಷ್ಟ್ರ, ಪಾಠೀನ Nr.). — ಸಾವಿರಾರು. -ಆರು 3. more than a thousand, a great number (C.; B. 2, 9; 3, 46. 47; 5, 108. 211). — ಸಾವಿರಾಳು. -ಆಳು. a thousand people, etc. ಗುಟ್ಟು ಸಾವಿರಾಳ ವೆಟ್ಟು (Prv.).

**ಸಾವಿರು sāviru.** = ಸಾವಿರ. ಸಾವಿರ್ನ್ದ (B. 5, 270).

**ಸಾವು sāvu.** death (ನಿಧನ, ನಾಶ, ಮೃತ್ಯು, ಮರಣ, ಪಂಚತ್ವ, etc. Hlā.; Mr. 394; ಮರಣ Nr.; ನಿರ್ಯಾಣ, ಮೃತಿ Nn. 79; ನಿರ್ಯಾಣ, ಮೃತ 90; ಸಂಸ್ಥೆ, ಮರಣ 137; ಸಮ್ಪ್ರಾಧ 156; ಬರ್ದುಗೆ Śmd. II; ಬರ್ದುಗ Śm. 44; Abh. P. 8, 15; Bp. 13, 7; 22, 17. 18; Abhā. 2, 76; C.; B. 5, 155. 206; Tu., also the funeral rites; T. ಚಾ, ಚಾವು, Te. ಚಾವು). [ನೀಂ ನಿನ್ನ ಸಾವನದನೆನಸುಂ ನೆನೆಯದೆ Pb. 2, 21]. 2, a corpse (ಶಬ, ಮೃತ Nn. 64; ಶಬ Mr. 521). ರೂಪಱುದ ಸಾವು (ಮಣ್ಮಱು Śmd. I). ಸಾವಿಂಗೆ ಸಮ್ಮತಿಗೆ ಆವುದನ್ತರವಯ್ಯ? ಸಾವು ತಾ ಸಮ್ಮತಿಯೊಳಲ್ಲ, ಕೋಪದ ತಾವುದೆ (*i. e.* ತವಿಸುವದೆ) ಸಮ್ಮತಿ (Sp.). ದೊಮ್ಬರ ಸಾವು ಗಣೆಯ ಮೇಲೆ, ಬಿಲ್ಲವರ ಸಾವು ಮರದ ಮೇಲೆ. — ಸಾವ ಕಾರರಾದರೇನು? ಸಾವು ತಪ್ಪಿಸ್ಯಾರೇ? — ಸಾವಿಗೆ ಅಂಜದವನು ನೋವಿಗೆ

ಹೆದಜ್ಯಾನೇ? — ಹತ್ತಜ (*i. e.* ಹತ್ತು ಮನ್ದಿಯ) ಸಾವು ಮದುವೇ ಸಮಾನ. — ಮನವಜಾಯದ ಪಾಪವಿಲ್ಲ, ಶಿವನಜಾಯದ ಸಾವಿಲ್ಲ (Prvs.; see Prv. s. ಸಾವಿರ). — ಸಾವು ನೋವು. death and pain. ಸಾವು ನೋವುಂ ಜೀವಿಗಳಿಗೆಲ್ಲ (Bp. 28, 11). — ಸಾವು ಹುಟ್ಟು. death and birth (Bp. 54, 21; Śāstrasāra in W. v. 1301).

**ಸಾವುಕಾರ sāvukāra.** = ಸಾವಕಾರ, etc. a richman; a big merchant. (C.; B. 3, 41; 4, 170). ಸಾಲವನ್ನು ಕೊಡುವ ಸಾವುಕಾರ (ಉತ್ತಮರ್ಣ G.).

**ಸಾವೆ sāve.** 1. = ಸಾಮೆ. the grain Panicum frumentaceum (ಶ್ಯಾಮಾಕ, ಶ್ಯಾಮಕ Hlā.; ಶ್ಯಾಮಕ Mr. 373; My.). see Prv. s. ಸಜ್ಜಿಗೆ. — ಸಾವೆಯಕ್ಕಿ. -ಅಕ್ಕಿ. the sāve grain (My.).

**ಸಾವೆ sāve.** 2. = ಸಾಯಿ 1. cream. (My.).

**ಸಾವೇರಿ sāvēri.** N. of a tune (J. 21, 56; My.; T.).

**ಸಾಷ್ಟಾಂಗ sa-aṣṭa-aṅga.** with eight limbs or members, viz. the hands, breast, forehead, knees and feet; with humble prostration of the body, touching the earth with the eight members; such an humble prostration. (Bp. 1, 54; 4, 47. 58; 49, 36; 53, 28; J. 17, 47). ಸಾಷ್ಟಾಂಗ ಮಾಡಿದರೂ ಅಟ್ಟಿವ್ಪೋದು ಹೋಗಲಿಲ್ಲ (Prv.). — ಸಾಷ್ಟಾಂಗವೆಱಗು. -ಎಱಗು. to prostrate, touching the earth with the eight members (Bp. 23, 35; 41, 22; J. 11, 1).

**ಸಾಷ್ಟಾಂಗದಣ್ಡಪ್ರಣಮ sāṣṭāṅga-daṇḍapraṇama.** a daṇḍapraṇama at which the eight members touch the ground (Bp. 30, 23; 37, 51; 44, 42).

**ಸಾಷ್ಟಾಂಗದಣ್ಡಪ್ರಣಾಮ sāṣṭāṅga-daṇḍapraṇāma.** = ಸಾಷ್ಟಾಂಗದಣ್ಡಪ್ರಣಮ. (My.).

**ಸಾಷ್ಟಾಂಗನಮಸ್ಕಾರ sāṣṭāṅga-namaskāra.** a namaskāra at which the eight members touch the ground (My.).

**ಸಾಷ್ಟಾಂಗಪ್ರಣಾಮ sāṣṭāṅga-praṇāma.** a praṇāma at which the eight members touch the ground (Bp. 27, 31; 50, 12. 27; J. 13, 25).

**ಸಾಸ sāsa.** Tbh. of ಸಾಹಸ. boldness, adventure, etc. (ಸಾಹಸ Śmd. 361; Ct. II, 11; ಅರ್ಪು, ಅದಟು, ಸಾಹಸ Kk. 41; ಅದಟು, ಅರ್ಪು Śm. 38).

**ಸಾಸತ sāsata.** Tbh. of ಶಾಶ್ವತ. permanent, etc. (Śmd. 368).

**ಸಾಸವಿ sāsavi.** Tbh. of ಸರ್ಷಪ. mustard. ಬಿಳಿಯ ಸಾಸವಿ (ಸಿದ್ಧಾರ್ಥ, ಸರ್ಷಪ Hlā.).

**ಸಾಸವೆ sāsave.** = ಸಾಸವಿ. (ಸರ್ಷಪ Śmd. 336; ಸರ್ಷಪ, ತನ್ತುಭ, ಕದಮ್ಬಕ Nr.; My.; T. ಐಯವಿ).

**ಸಾಸಿ sāsi.** Tbh. of ಸಾಹಸಿ. bold. ಆಸನದಲುಮ್ಬುವದು, ಸೂಸುವದು ಬಾಯಲ್ಲಿ, ಬೇಸಱದ ಹೊತ್ತು ಕೊಲುತಿಹುದು; ಕವಿಗಳ ಸಾಸಿಗಳೆ, ಪೇಱು! (a syringe, sp.).

**ಸಾಸಿಗ sāsiga.** = ಸಾಹಸಿಗ. Tbh. of ಸಾಹಸಿಕ, q. v. (ಸಮರ್ಥ Ct. I, 41; Abh. P. 9, 101; G. 1, 108; Rām. 3, 6, 48; see s. ತೆವರು 3). [ಆ ಸಾಸಿಗನುಚಿತ ದೀಕ್ಷೆಯಂ ಕೈಕೊಣ್ಡಂ Ap. 6, 5].

**ಸಾಸಿಮೆ sāsime.** = ಸಾಸವೆ, etc. the Indian mustard, Brassica juncea, H. f. or T. (St. & Pl.; Z.).

**ಸಾಸಿರ್ sāsir.** = ಸಾ (Śmd. 225). — ಸಾಸಿರ್ಗಣ್ಣ. -ಕಣ್ಣ. Indra (ಸುರಪತಿ Śm. 9). — ಸಾಸಿರ್ಗೆಯ್ಯ. -ಕೆಯ್ಯ. the sun (ರವಿ Śs.). — ಸಾಸಿರ್ಮಡಿ. thousand-fold (Śmd. 227; Śāstrasāra in W. v. 1269; Grj. 4, 15). [ಸಾಸಿರ್ಮಡಿಯಿನೆ ಪೊನ್ಬಣ್ಣದ ಕೆಮ್ಬಿಡಿದಿರೆ ಸೊಗಯಿಪುವು ಗನ್ಧಶಾಳಿ ವನಂಗಳ್ Ap. 1, 60]. — ಸಾಸಿರ್ವನಿತೆಯರ್. a thousand women (Śmd. 227).

**ಸಾಸಿರ sāsira.** Tbh. of ಸಹಸ್ರ. a thousand. (Śmd. 225. 226; Cpr. 6, 37; T. ಆಯಿರ). [ತೊಮ್ಬತ್ತಾಱು ಸಾಸಿರ ಗೋಪಕುಮಾರರೊಡನೆ ಕೂಡಿ ಕಳಿಪಿ Pb. 9, 12 va.]. ದೇವರ್ಕಳ ೨ ಸಾವಿರ ಯುಗಂಗಳು ಬ್ರಹ್ಮನ ೧ ದಿವಸ (Hlā. I, 115). ಸುರರ ಎರಡು ಸಾಸಿರ ಯುಗಂ ಬ್ರಹ್ಮಂಗೆ ದಿನಮರ್ ಎನಿಕ್ಕುಂ (Mr. 71). — ಸಾಸಿರಗೆಯ್ಯ. -ಕೆಯ್ಯ. the sun (ಬಿಸಿಗದಿರ, etc., ಸಪ್ತಾಶ್ವ Kk.).

**ಸಾಸಿರ್ಮೆ sāsir-me.** (Śmd. 243). a thousand times.

**ಸಾಸಿರ್ವರ್ sāsirvar.** (Śmd. 227). a thousand persons. [ಸಾಸಿರ್ವರ್ ವನಿತೆಯರ್ Ap. 6, 5; ಸಾಸಿರ್ವರೇಱಿಯೊಡಲ್ಲದೀಯೋಡಂ ನಡೆಯದೆ ನಿಬ್ಬದುಂ Pb. 1, 68 va.]. ಸಾಸಿರ್ವರ್ ಪ್ರಿಯತನೂಭವರ್ (227 Mdb.). ಪಯಿಂಛಾಸಿರ್ವರುಂ ಯುದ್ಧದೊಳ್ (121).

**ಸಾಸಿವೆ sāsive.** = ಸಾಸಿಮೆ, etc. mustard (Bp. 1, 65; My.; ಸರ್ಷಪ G.); [Tu. ಸಾಸಮಿ, ದಾಸಮೆ]; a kind of dish (My.).— ಸಾಸಿವೆಕಾಱು. mustard-seed; a grain of mustard-seed (ಕೃಷ್ಣಾಭಿಜನನ G.). ಸಾಸಿವೆಕಾಱಷ್ಟು ಜೀವ ಉಱಿದರೆ ಆನೆಯಷ್ಟು ಉಣ್ಣೇನು. — ಸಾಸಿವೆಕಾಱು ಬೆಕ್ಕಿಗೆ ಪರ್ವತ (Prvs.). — ಸಾಸಿವೆಗದಡು. a disagreeable smell arising from the burning of mustard (C. Bp. 42, 32). — ಸಾಸಿವೆಯನ್ನ. -ಅನ್ನ. boiled rice mixed with mustard, etc. (My.).

**ಸಾಸುವೆ sāsuve.** = ಸಾಸಿವೆ, etc. (ಸರ್ಷಪ, ರಾಜಿಕ Mr. 137; Si. 304; My.). ಬಿಳೀ ಸಾಸುವೆ (ಸಿದ್ಧಾರ್ಥ Si. 304); ಕರೀ ಸಾಸುವೆ (ಕ್ಷವ, etc., ದೊಡ್ಡ ಸಾಸುವೆ, ಹುಚ್ಚುಸಾಸುವೆ 305).

**ಸಾಸೆ sāse.** = ಸೇಸೆ. the remains of flowers, raw rice and other offerings made to an idol, distributed as a blessing among the worshippers, etc. (Bp. 61, 22).

**ಸಾಸ್ತ್ರ sāstra.** Tbh. of ಶಾಸ್ತ್ರ. an order, science, etc. (My.).

**ಸಾಸ್ನೆ sāsne.** *the dewlap of an ox.*

**ಸಾಹ್ sāh.** bearing, enduring, able, overpowering, winning. see ತುರಾಷಾಹ್, ಪೃತನಾಷಾಹ್.

**ಸಾಹ saha.** = ಸಹ. with, etc. see ಉತ್-.

**ಸಾಹಚರ್ಯ sāhacarya.** (fr. ಸಹಚರ). *companionship, fellowship, company, association, society.*

**ಸಾಹಜಿಕ sāhajika.** (fr. ಸಹಜ). natural, co-existent (B. 4, 208).

**ಸಾಹಣ sāhaṇa.** the act of tending and training horses (Cpr. 9, 95).

**ಸಾಹಣಿ sāhaṇi.** = ಸಹಣಿ. a groom (Bp. 59, 28).

**ಸಾಹಣಿಗ sāhaṇiga.** = ಸಾಹಣಿ. (Bp. 9, 47).

**ಸಾಹಸ sāhasa.** = ಸಾಸ. violence, force, rapine; *any act of aggression or oppression or hatred.* 2, punishment, chastisement, fine. 3, boldness, daring, courage, effort, prowess, valour, power, strength (ಪರಾಕ್ರಮ Nn. 56; ನಾನಾ, ಅದಟು 145; ಬಲ Śm. 108). 4, foolhardiness, rashness, temerity, inconsiderate hastiness, impetuosity.

**ಸಾಹಸಗಾಱ sāhasa-gāṟa.** a valorous or daring or effort-making or reckless man (My.).

**ಸಾಹಸಾಂಕ sāhasa-aṅka.** marked or characterized by daring or prowess (Śsv. 4, 53).

**ಸಾಹಸಾರ್ಣವ sāhasa-arṇava.** a man who is an ocean of valour (Śsv. 4, 85).

**ಸಾಹಸಿ sāhasi.** = ಸಾಸಿ. violent, furious, ferocious. 2, bold, daring; impetuous; a person who displays boldness, courage, effort, valour, power or strength (My.; B. 4, 68; Rśv. 5, 131). 3, foolhardy, rash, inconsiderate.

**ಸಾಹಸಿಕ sāhasika.** = ಸಾಸಿಗ, ಸಾಹಸಿಗ. *using great force or violence* violent, cruel, brutal, ferocious, rapacious. 2, impetuous; bold, daring; valorous, strong, powerful, vigorous, valiant (Cpr. 10, 100; Bh. 4, 2, 67).

**ಸಾಹಸಿಗ sāhasiga.** Tbh. of ಸಾಹಸಿಕ. a bold, daring, valorous, strong, powerful or valiant man (ಹೂಣಿಗ Bhn. 18; Bp. 22, 2; 49, 45).

**ಸಾಹಸ್ರ sāhasra.** (fr. ಸಹಸ್ರ). relating or belonging to a thousand; consisting of a thousand, etc. 2, *a multitude of thousands;* an army or detachment consisting of a thousand men.

**ಸಾಹಾಯ್ಯ sāhāyya.** (fr. ಸಹಾಯ). friendship, fellowship, alliance, confederation. 2, help, succour. (R.).

**ಸಾಹಿತ್ಯ sāhitya.** (fr. ಸಹಿತ). association, connection, combination, union, society, fellowship; associated with, etc. 2, literary composition, rhetorical composition, rhetoric, poetry. (Bp. 3, 42). 3, a collection of materials or means or rule for the production or performance of anything, a collection of materials or implements for cooking, travelling or working (Grj. 3, 119 va.; B. 4, 115; My.). ಅವಿರಲಭಕ್ತಸಾಹಿತ್ಯನು (Mr. 1). ತನುವಿ ನಿನ್ದೊನ್ದು, ಗುಣಂಗಳಿನ್ದೆರಡು, ಸಾಹಿತ್ಯಂಗಳಿಂ ಮೂಱು, ಮನದಿಂ ನಾಲ್ಕು ಮಲತ್ವದಿನ್ದಯಿದು, ಸಂಚಾರತ್ವಂಗಳಿನ್ದಾಱು, ಸಜ್ಜನದಿನ್ದೇೞು, ಸುತತ್ವದಿನ್ದೆ ತಳರ್ದೆಣ್ಟಂಗಂ ಭುಜದ್ವನ್ದ್ವದೊಳ್ ತನಗಿನ್ನಾರ್ ಸರಿ ನಾಗವರ್ಮನುಗೆ ದಾಸಂ ಕಾಲಿದಾಸಪ್ಪುರಂ (one MS. of Ch. as its verse 25).

**ಸಾಹಿತ್ಯಭೇದ sāhitya-bhēda.** a particular figure of speech in rhetoric or poetry (ಜಾತಿ Nn. 76).

**ಸಾಹುಕಾರ sāhukāra.** = ಸಾವಕಾರ, etc. a rich merchant. (My.). ಸಾಹುಕಾರರಿರುವ ಮನೆ (ಹರ್ಮ್ಯ, ಹಣಗಾಱರಿರುವ ಸ್ಥಳ, ಧನಿಕರಿರುವ ಉಪ್ಪರಿಗೆ Si. 109).

**ಸಾಹೇಬ sāhēba.** (= ಸಾಬ್). a lord or master; a gentleman; sir, etc. (My.; B. 5, 285; Mhr., H.).

**ಸಾಹ್ಯ sāhya.** (fr. ಸಹ). conjunction, union, society, association, companionship. (R.).

**ಸಾಳಗ sāḷaga.** = ಸಾಳಂಗ. a kind of rāga or musical mode (Cpr. 7, 97; Bp. 19, 11; J. 21, 58; Bh. 1, 12, 20; Sk. ಸಾಲಂಗ).

**ಸಾಳಂಗ sāḷaṅga.** = ಸಾಳಗ. (J. 21, 56).

***ಸಾಳಭಂಜಿಕೆ sāḷa-bhañjike.** = ಸಾಲಭಂಜಿಕೆ. ಸಾಳಭಂಜಿಕೆಗೆತ್ತುದು ಕೆಳ ದಿಯರ ತಣ್ಡಮಾಕೆಯ ರೂಪಂ Pb. 4, 54.

**ಸಾಳುವ sāḷuva.** = ಸಾಳ್ವ. a kind of bird, a hawk used in hunting (Rām. 3, 1, 32; Bh. 1, 20, 53; Te. ಸಾಳುವ, ಸಾಳುವ).

**ಸಾಳೆಯ sāḷeya.** = ಸಾಲೆಯ s. ಸಾಲೆ 2, q. v.

**ಸಾಳೇರಿಮೃಗ sāḷēri-mṛiga.** a porcupine (S. Mhr.; Mhr. ಸಾಳಿನ್ದರ).

**ಸಾಳ್ವ sāḷva.** = ಸಾಳುವ. (Śsv. 3, 33).

**ಸಾೞಿಗೆ sāḻige.** = ಜಾೞಿಗೆ, q. v. (ಉಡಿಗೆ Kk. 63).

**ಸಿಂಹ siṁha.** = ಸಿಂಹ್ವ, ಸಿಂಗ 1, ಸಿವ 2. *a lion.* 2, the sign of the zodiac Leo. 3, *pre-eminent, best;* a hero or any eminent person. ಸಿಂಹವಾದದ್ದು ಸಂಹರಿಸಲಾಱದೋ? (Prv.).

**ಸಿಂಹನಾದ siṁha-nāda.** *a war-cry, a war-hoop.* see ಆಚ್ಛವಿಷ.

**ಸಿಂಹನಾಶನಮೃಗ siṁha-nāśana-mṛiga.** an animal that destroys lions. ಎಣ್ಟು ಕಾಲುಗಳಿನ್ದಲೂ ಎರಡು ಮುಖಗಳಿನ್ದಲೂ ಉಗ್ರವಾಗಿ ರುವ ಸಿಂಹನಾಶನಮೃಗ (ಶರಭ Si. 170).

**ಸಿಂಹಪೀಠ siṁha-pīṭha.** = ಸಿಂಹಾಸನ. (ಪಟ್ಟವಣೆ Ct. II, 87; Bp. 51, 10).

**ಸಿಂಹಪುಚ್ಚಿ siṁha-pucci.** *N. of a plant* (= ಕ್ರೋಷ್ಟುವಿನ್ನೆ, q. v.).

**ಸಿಂಹಲ siṁhala.** ಸಿಂಹಳ. = ಸಿಂಹ್ವಲ, ಸಿಂಗಳ. the island or country of Ceylon (Bp. 6, 18; 61, 30); N. of a king of Ceylon (Rśv. 5, 130. 131; 6, 32; 7, 15).

**ಸಿಂಹಲಲಾಟ siṁha-lalāṭa.** the form of a lion's head on a bracelet (My.).

**ಸಿಂಹವಾಹನ siṁha-vāhana.** Śiva. — ಸಿಂಹವಾಹನೆ. Durgā (My.).

**ಸಿಂಹವಿಷ್ಟರ siṁha-viṣṭara.** = ಸಿಂಹಾಸನ, (Grj. 3, 116; 4, 163 va.).

**ಸಿಂಹಸಂಹನನ siṁha-saṁhanana.** lion-shaped: *well-shaped, handsome.*

**ಸಿಂಹಸೇನ siṁha-sēna.** N. of a king (Śmd. 177).

**ಸಿಂಹಾಗಾರ siṁha-āgāra.** (Śmd 283). a lion's den.

**ಸಿಂಹಾಣ siṁhāṇa.** = ಶಿಂಹಾಣ, ಶಿಂಘಾಣ, (ಸಂಘಾತ), ಸಿಂಘಾಣ, ಸಿಂಹಾನ. the mucus of the nose (Sk.; *cf.* ಸಿಮ್ಬುಳ).

**ಸಿಂಹಾನ siṁhāna.** *rust of iron.* 2, the mucus of the nose.

**ಸಿಂಹಾಸ siṁha-āsa.** = ಸಿಂಹಾಸನ. see ಬಿತ್ತರಿಗೆ.

**ಸಿಂಹಾಸನ siṁha-āsana.** = ಸಿಂಹ್ವಾಸನ. lion-seat: *a throne* (ಮುಶೀರ, ಆಸನ Nn. 91; ಭದ್ರಪೀಠ Mr. 262; ಪಟವಣೆ, ಗದ್ದುಗೆ Kk. 26; Bp. 46, 52; 59, 57; C. Bp. 47, 16). ಮಡೇಲಿ ಕುಣ್ಡ್ರಲಿಕ್ಕೆ ಹಡೇಲಿ ಇಲ್ಲದವ ಸಿಂಹಾಸನ ಏಱ್ಯಾನೇ? (Prv.).

**ಸಿಂಹಾಸನಾಧಿಪತಿ siṁhāsana-adhipati.** a king (My.).

**ಸಿಂಹಾಸನಾರೂಢ siṁhāsana-ārūḍha.** sitting on a throne; a king (My.).

**ಸಿಂಹಾಸನ್ದಿ siṁha-āsandi.** = ಸಿಂಹಾಸನ. (Abh. P. 6, 169; 13, 101).

**ಸಿಂಹಾಸ್ಯ siṁha-āsya.** lion-faced. 2, *the plant Gendarussa vulgaris* Nees.

**ಸಿಂಹಿ siṁhi.** a lioness. 2, *the plant Gendarussa vulgaris* Nees. 3, *the plant Solanum melongena.* 4, N. of the mother of Rāhu.

**ಸಿಂಹಿಕಾತನುಜ siṁhikā-tanuja.** son Siṁhikā, Rāhu (Mr. 39).

**ಸಿಂಹಿಕೆ siṁhike.** ಸಿಂಹಿಕಾ. N. of the mother of Rāhu. (Rām. 5, 1, 22). 2, (= ಸಿಂಹಿ No. 3?) ಚಿತ್ರಟೆ, ರುಚಿ, ಸೊಣ್ಡೆ (Mr. 130).

**ಸಿಂಹ್ವ siṁhva.** Tbh. of ಸಿಂಹ. (B. 5, 241; Cb. 142. 158. 159).

**ಸಿಂಹ್ವಲ siṁhvala.** Tbh. of ಸಿಂಹಲ. (B. 5, 39).

**ಸಿಂಹ್ವಾಸನ siṁhvāsana.** Tbh. of ಸಿಂಹಾಸನ. (Cb. 158).

**ಸಿಕ್ sik.** = ಸಿಕ್ಕಿ, ಸಿಕ್ಕು 3. P. p. of ಸಿಕ್ಕು 1 or ಸಿಗು, in ಸಿಕ್ಕೊಳ್ (My.). ಲಂಗರವು ತಳಕ್ಕೆ ಹೋಗಿ, ಬುಡದೊಳಗಿನ ಕೆಸಱೊಳಗೆ ಸಿಕ್ಕೊಣ್ಡು, ನಿಲ್ಲುತ್ತದೆ (B. 3, 118).

**ಸಿಕತ sikata.** = ಸಿಕತೆ. sand (ಪುೞಿಲ್, ಮಣಲ್, ಮರಲ್, ಮಲರ್ Śm. 36; ಮಳಲ್ Nn. 6); a sand-bank; an island with sandy shores.

**ಸಿಕತಾಮಯ sikatā-maya.** full of sand, *sandy.*

**ಸಿಕತಾವತ್ sikatā-vat.** *sandy.*

**ಸಿಕತಿಲ sikatila.** *sandy.*

**ಸಿಕತೆ sikate.** ಸಿಕತಾ. = ಸಿಕತ. sandy soil (ಮಳಲುಳ್ಳ ಮಹಿ Mr. 93); *sand, gravel;* a sand-bank, etc. (ಪುೞಿಲ್ Ct. II, 10).

**ಸಿಕರ sikara.** Tbh. of ಶಿಖರ. (My.).

**ಸಿಕಲ sikala.** polishing, furbishing, burnishing (Mhr. ಶಿಕಲ, ಸಿಕಲ).

**ಸಿಕಲಗಾರ sikala-gāra.** = ಸಿಕಲಿಗಾರ. a polisher of tools, weapons, etc. ಸಾಣೆ ಹಿಡಿಸುವವ, ಶಸ್ತ್ರಮಾರ್ಜ G.; Mhr. ಶಿ- and ಸಿ-).

**ಸಿಕಲಿಗಾರ sikaligāra.** = ಸಿಕಲಗಾರ. (S. Mhr.). ಜೀನಗಾಱಗೆ ಸಿಕಲಿಗಾರ ಸಾಕ್ಷಿ (Prv.).

**ಸಿಕಲಿಗ್ಯ sikaligya.** = ಸಿಕಲಿಗಾರ. (S. Mhr.).

**ಸಿಕಾರ sikāra.** hunting; game (Mhr. ಶಿಕಾರ).

**ಸಿಕಾರಖಾನೆ sikāra-khāne.** a menagerie, an aviary, etc. (B. 5, 251; Mhr. ಶಿ-).

**ಸಿಕಾರಿ sikāri.** = ಶಿಕಾರಿ, q. v. hunting, etc. (My.).

**ಸಿಕಿ siki.** = ಸಿಕೆ. a seal, etc. — ಸಿಕಿಯುಂಗರ. -ಉಂಗರ. = ಸಿಕೆಯುಂಗರ. (My.).

**ಸಿಕೆ sike.** = ಸಿಕಿ, ಸಿಕ್ಕೆ. a coining-die; the royal seal; the stamp produced by the coining-die or by a seal or stamp (Mhr., H. ಶಿಕ್ಕಾ; My.; ಮುದ್ರೆ G.). — ಸಿಕೆಯುಂಗರ. -ಉಂಗರ. the royal seal (My.).

**ಸಿಕ್ಕ sikka.** Tbh. of ಶಿಕ್ಯ. a sling for suspending things, etc. ಸಿಕ್ಕದ ಮೇಲೆ ಇಟ್ಟದ್ದು ಮಕ್ಕಳಿಗಾಗದೋ? (Prv.).

**ಸಿಕ್ಕಟಿ sikkaṭi.** = ಸಿಕ್ಕಟಿಗೆ, ಸಿಕ್ಕಣಿಗೆ. a comb (My.; Te. ಚಿಕ್ಕಣ್ಟಿ; T. ಚಿಕ್ಕ, ಚೀಪ್ಪು; M. ಚಿಕ್ಕಱುಕ್ಕಿ; M. ಚಿಕ್ಕು, ಚಿರಕ್ಕು, ಚೀಗೆ, to comb; ಚಿಕ್ಕಱುಕ್ಕು, to disentangle, comb out).

**ಸಿಕ್ಕಟಿಗೆ sikkaṭige.** = ಸಿಕ್ಕಟಿ, etc. (My.).

**ಸಿಕ್ಕಣಿಗೆ sikkaṇige.** = ಸಿಕ್ಕಟಿ, etc. (My.).

**ಸಿಕ್ಕಿಸು sikkisu.** = ಸಿಗಿಸು 2. to insert, to put in or on (My.). ಬೆಟ್ಟಕ್ಕೆ ಹೋಗುವವನ ಸೊಣ್ಟದಲ್ಲಿ ಕುಡುಗೋಲು ಸಿಕ್ಕಿಸಿದ ಹಾಗೆ (Prv.). 2, to cause oneself to be caught, to be caught (My.). 3, to cause to become entangled or ensnared, to entangle, to ensnare (Bp. 42, 16).

**ಸಿಕ್ಕು sikku. 1.** = ಸಿಗು, ಸಿರ್ಕು 1, ಸಿಲಿಕು, ಸಿಲುಕು 1, ಸಿಲ್ಕು 1. to become entangled; to be caught; to fall into the hands of; to fall or be brought under the power of; to get among; to enter; to be found; to be obtained or got (C.; Te., T., M.; Tu. ತಿಕ್ಕು, ಸಿಕ್ಕು). ಸಿಕ್ಕಿದ ಅಳಿ ಪೋಱಿ ವಣ್ಟವು, ಅಬ್ಜಂಗಳ ಬಸುಱೊಳ್ ಇರ್ದು (Bp. 12, 48). ಖಗಮೃಗ ನಿಕರದೊಳು ನೞಿಸಿಕ್ಕಿದೆನು (18, 54). ನಿಮ್ಮ ಠಕ್ಕಿಗೆ ಸಿಕ್ಕುವನ್ತೆ (24, 65). ಬಲೆಗೆ ಮೊದಲಲಿ ಸಿಕ್ಕಿದಾ ಮೀನಂ ತೆಗದು (27, 20). ಬಲೆಯಲ್ಲಿ...ಮತ್ಸ್ಯವು ಸಿಕ್ಕಿ (27, 22). ಈ ಗೃಹರೇಣು ಸಿಕ್ಕಿದವಂಗೆ ಅಹುದು ಮುಕ್ತಿ (30, 13). ಎನ್ನ ಮಾತಿಗೆ ಸಿಕ್ಕಿದಂ (31, 13). ಎನಗೆ ಸಿಕ್ಕಿದೆ! (32, 15). (ಕೇಸರಿ) ಅವಕ್ಕೆ (ಜಾಯಿಲಂಗಳ್ಗೆ) ಸಿಕ್ಕದೆ (34, 24). ಶಿವಯೋಗನಿದ್ರೆಯೊಳ್ ಅವಿರತಂ ಸಿಕ್ಕಿರಲು (35, 47). ತಾವು ಸಿಕ್ಕಿದೆವೆನುತ (52, 14). ಭಕ್ತಿಹೀನರಿಗೇಕೆ ಸಿಕ್ಕುವನ್ ಈಶ್ವರೇಶ್ವರನು? (53, 20). ಹರಗಣಾಜ್ಞಾಪಾಶದಲಿ ಸಿಕ್ಕಿರ್ಪನ್ ಆ ಹರಿಯು (53, 68). ಕರ್ಮಶಾಸ್ತ್ರಂಗಳ ಬಲೆಗೆ ಸಿಕ್ಕಿ (54, 29). ಬ್ರಹ್ಮತಿಗೆ ಸಿಕ್ಕಿ (54, 39). ಅವನ್ದಿರ ಮನದ ಕುಟಿಲಂಗಳಿಗೆ ಸಿಕ್ಕದೆ (60, 16). ಕರ್ಮವಿಧಿಗಳ ತಮಕೆ ಸಿಕ್ಕಿದೆ (60, 47). ಸಿಕ್ಕಿದವು ಕಣ್ಮದೊಳ್ ಮಾತುಗಳ್ (J. 19, 14). ಬೇಡರ್ಗೆ ಸಿಕ್ಕದೋಡಿದುದೊನ್ದೆರಲೆ (28, 52). ಇಱುಬಿನಲಿ ಸಿಕ್ಕಿರ್ದ ಹುಲಿ (1, 8, 21). ಸಿಕ್ಕಿದವು ಹೆದ್ದೊಡೆಗಳ್ ಉರಗನ ತೆಕ್ಕೆಯಲಿ (3, 13, 33). ಬುದ್ಧಿಯಿನ್ದಲಿ ಗಱಿಸಿ ಸಿಕ್ಕಿರ್ದ ಅರ್ಥಂ (Dp. 1). ಸಿಂಹವು ಬೇಡರವನ ಬಲೆಯೊಳಗೆ ಸಿಕ್ಕಿಕೊಣ್ಡು (B. 4, 91). ಅಪ್ಪುಗಾಲು ಹಾಕಿದರೆ ರಪ್ಪೆ ಸಿಕ್ಕ್ಯಾಳೇ? — ಕುಡಿಯುವ ಪಾನಕದಲ್ಲಿ ಕಡ್ಡಿ ಸಿಕ್ಕಿದ ಹಾಗೆ. — ಜುಟ್ಟು ಇದ್ದವ ನೆಟ್ಟಗೆ ಸಿಕ್ಕ್ಯಾನು. — ನೇತಾಡುವವನ ಹತ್ತರ ಮಾತಾಡಲಿಕ್ಕೆ ಹೋದರೆ ಜೋತಾಡುವದು ಸಿಕ್ಕೀತು. — ಶಾವಿಗೆ ಸಿಕ್ಕಿ, ಸತ್ತವನಿಲ್ಲ; ಹಾವಿಗೆ ಸಿಕ್ಕಿ, ಬದುಕಿದವನಿಲ್ಲ. — ಪ್ರಾರ್ಥನೆ ಮಾಡಿದರೆ ಸಿಕ್ಕದ್ದು ಕೀರ್ತನೆ ಹೇೞಿದರೆ ಸಿಕ್ಕೀತೇ? — ಬಲೆಗೆ ಸಿಕ್ಕದ್ದು ಕೋಲಿಗೆ ಸಿಕ್ಕೀತೇ? — ದಾರೀಲಿ ಸಿಕ್ಕಿದ್ದು ಧರ್ಮಕ್ಕೆ ಹೋಯಿತು. — ಬಲೆಗೆ ಸಿಕ್ಕಿದ ಪಕ್ಷಿ, ಒಲೆಗೆ ಸಿಕ್ಕಿದ ಇಱುವೆ. — ಬೆಲೆಯಿಲ್ಲದೆ ಸಿಕ್ಕಿದ್ದು ಒಲೆಗೆ ಹೋಯಿತು. — ಭಕ್ಷವಿಲ್ಲದಿದ್ದರೂ ದಕ್ಷಿಣೆ ಸಿಕ್ಕಿದರೆ ಸಾಕು. — ಸಿಕ್ಕಿದರೆ ಉಚ್ಚೆ ಕುಡಿದೇನು, ಸೊಕ್ಕಿದರೆ ರಕ್ತ ಕುಡಿದೇನು. — ಮನ್ನಣೆ ಸಿಕ್ಕದಿದ್ದರೆ ತಲ್ಲಣಗೊಳ್ಳಬಹುದೇ? (Prvs.). ಶತ್ರುಗಳ ಕೆಯ್ಗೆ ಸಿಕ್ಕಿದ (ಅಭಿಪನ್ನ Si. 439). see Bh. 1, 10, 38; J. 6, 30. 2, to cause to go or make go in, to insert, etc. (Bp. 21, 41; 55, 44; J. 23, 1). — ಸಿಕ್ಕಿ ಬೀೞು. to be caught; to fall into (another's) hands (My.).

**ಸಿಕ್ಕು sikku. 2.** = ಸಿರ್ಕು 2, (ಸಿಲುಕು 2), ಸಿಲ್ಕು 2. the state of being entangled, entanglement, intricacy (My.; Te., T. ಚಿಕ್ಕು); impediment, hindrance, obstacle, trouble (J. 27, 42; My.). [ಉರಿಯ ಕೊಳ್ಳಿಯ ಕೊಣ್ಡು ಮಣ್ಡೆಯ ಸಿಕ್ಕ ಬಿಡಿಸುವನ್ತೆ Bv. 661]. ಒನ್ದಕ್ಕೆ ಒನ್ದು ಸೇರದೆ ಸಿಕ್ಕಿಲ್ಲದ ಕೂದಲು (ಶೀರ್ಷಣ್ಯ, etc. Si. 216); ಕೂದಲು ಸಿಕ್ಕುಬಿಡಿಸುವ ಸಾಧನ (ಪ್ರಸಾಧನಿ, etc., ಬಾಚಣಿಗೆ, 231). — ಸಿಕ್ಕುದಲೆ. -ತಲೆ. an entangled head of hair (My.). — ಸಿಕ್ಕು ಬಿಡಿಸು. to disentangle (as hair or thread, My.). — ಸಿಕ್ಕು ಮಾಡು. to entangle (Dp. 53, 5).

**ಸಿಕ್ಕು sikku. 3.** (= ಸಿಕ್). P. p. of ಸಿಗು (S. Mhr.). ಸಿಕ್ಕವರ ಸಂಗಡ ಜಗಳಾಡುತ್ತಾರೆ (B. 1, 18). ಇವು (ಎತ್ತು, ಆಕಳು) ಬಹು ತರವಾಗಿ ಹೊತ್ತಿಗೆ ಸಿಕ್ಕ ನೀರು ಕುಡಿಯುತ್ತವೆ (3, 17). ಸಾವುಕಾರನ ಮನೆಯ ಕನ್ನ ಕೊಱೆದು, ಸಿಕ್ಕ ಬದುಕು ತಕ್ಕೊಣ್ಡುಹೋಗಿ (3, 41). ಒನ್ದು ದಿನ ಕಳವಿನ ಒಡವೆ ಸಹಿತ ಸಿಕ್ಕನು (3, 43). — ಸಿಕ್ಕು ಸಿಕ್ಕು. rep. ಸಿಕ್ಕ ಸಿಕ್ಕ ಹಾಗೆ ಅವನ ಮೇಲೆ ಚಾಡಿ ಹೇೞಹತ್ತಿದನು (B. 4, 51).

**ಸಿಕ್ಕೆ sikke.** = ಸಿಕೆ, etc. the royal seal. (ಮುದ್ರೆ Cb.).

**ಸಿಕ್ತ sikta.** sprinkled, besprinkled; wetted, moistened; poured out; impregnated, engendered. see ಅಭಿಷಿಕ್ತ.

**ಸಿಕ್ಥ siktha.** boiled rice; a lump of boiled rice, a mouthful of boiled rice kneaded into a ball; bee's-wax; indigo. see ಭಕ್ತ-.

**ಸಿಕ್ಥಕ sikthaka.** = ಸಿಕ್ಥ. a lump of boiled rice, etc. (see ಭಕ್ತ-); *bee's-wax* (ಮಯಣ Mr. 358, o. r. ಮೇಣ).

**ಸಿಗಸು sigasu.** = ಸಿಗಿಸು 1. to have split (as wood, My.).

**ಸಿಗಿ sigi.** to split, as wood; to tear or rend with the teeth, as sugar-cane (My.; Tu. ತಿಗಿ, ತಿಗು, ತಿಗುರು, ಸಿಗುರು).

**ಸಿಗಿಸು sigisu. 1.** = ಸಿಗಸು. (My.).

**ಸಿಗಿಸು sigisu. 2.** (fr. ಸಿಗು). = ಸಿಕ್ಕಿಸು. to insert. (S. Mhr.).

**ಸಿಗು sigu.** = ಸಿಕ್ಕು 1. to be caught, etc. (S. Mhr.). P. p. ಸಿಕ್ಕು 3, q. v. ಮುರಾರಿ ಗೋಪಿಯರಲ್ಲಿ ಹಾದರವಾಡಿ, ಸಿಗನೇ? (Bp. 54, 40). ಒಮ್ಮೊಮ್ಮೆ ಮನುಷ್ಯರೂ ತೋಳಗಳ ಕೆಯ್ಯೊಳಗೆ ಸಿಗುವದುಣ್ಟು (B. 2, 18). ಕಾಡ ನಾಯಿಗಳು ಬಹು ತೀವ್ರ ಓಡುವವು, ಏನು ಮಾಡಿದರೂ ಕೆಯ್ಗೆ ಸಿಗುವದಿಲ್ಲ (3, 40). ಅಡವೀ ಕತ್ತೆಗಳು ಮನುಷ್ಯರ ಕೆಯ್ಗೆ ಬೇಗ ಸಿಗುವದಿಲ್ಲ (3, 48). ನಿನಗೆ ಅಲ್ಲಿ ಸಿಗದಿದ್ದರೆ ಯಾರ ಬೞಿಯಲ್ಲಾದರೂ ಕೆಯ್ಗಡ ಇಸ ಕೋ! (3, 78). ನನಗೆ ಈ ಗುಡ್ಡದೊಳಗೆ ದಾರಿ ಸಿಗಲಿಕ್ಕಿಲ್ಲ (3, 123). ನಿಮಗೆ ದಾರಿ ಸಿಗಲೊಲ್ಲದೋ? (3, 123). ಕುದುರೆ ಇನ್ನು ಹ್ಯಾಗೆ ಸಿಗುವದು? (4, 79). — ಸಿಕ್ಕು ಬೀೞು. = ಸಿಕ್ಕಿ-. ಆ ಹುೞುವು ಜೇಡಹುೞುದ ಬಲೆಯೊಳಗೆ ಸಿಕ್ಕು ಬಿದ್ದು (B. 4, 112).

**ಸಿಗುೞ್ siguṛ. ಸಿಗುೞು.** = ಸಿಬೞು, ಸಿವೞು, ಸಿವುೞು. a splinter, a shiver; that is pared off, rind (ಕೆಲ್ಲೆ Śm. 49; ಕಕ್ಕು 79; ಕೆಲ್ಲೆ Kk. 56; see ಚಿಪ್ಪು). ಕೞೆದ ಸಿಗುೞಿನ ಕಬ್ಬಿನನ್ದದಿ... ಲಲಿತವಸ್ ಅಹ ಕನ್ನಡದ ನುಡಿ (Abhā. 1, 5, o. r. ಸಿಬೞಿನ). — ಸಿಗುೞಿ ಚನ್ದಯ್ಯ. N. (Bp. 58, 7). — ಸಿಗುೞೇೞು. -ಏೞು. splinters or shivers to rise or be raised (Bh. 5, 11, 39; Rām. 4, 3, 7).

**ಸಿಗುಳು siguḷu.** = ಸೀಳ್ 1, etc. to split, etc. ಸಿಗುಳಲ್ ಪಟ್ಟದು (ದಾರಿತ, ಭಿನ್ನ, ಭೇದಿತ Si. 382; *only* in Si.).

**ಸಿಗ್ಗಾಳಿ siggu-āḷi.** (Śmd. 239). a person who is ashamed, a bashful person.

**ಸಿಗ್ಗಿಗ siggiga.** a daitya or rākṣasa (ಮಬ್ಬಿಗ, ರಕ್ಕಸ, ದೈತ್ಯ ರಾಕ್ಷಸಾವಳಿ Kk. 11*a*; *cf.* ಸೆರಗು? Te. ಸೆಗ್ಗು, reproach, censure = ಅಪವಾದ, ನಿನ್ದೆ).

**ಸಿಗ್ಗು siggu.** (Śmd. 248). shame, decency; modesty, bashfulness; timidity (My., Te.); disgust (My.). [ಕುಪ್ಪು

**ಹಮ್ಮು hammu. 2.** pride, conceit (ಬೆಚ್ಚಿಪ್ಪುದು Ct. I, 44; ಹನ್ನೆ, etc., ಗರ್ವ Ss.; C.; Bp. 1, 58; 30, 10; 42, 17; 46, 15; 55, 33; Tu.; T. ಪಮ್ಬು, to extend = ಪರವು; to increase; to rise, to get up = ಎಬು; *cf.* ಪಬುರ 1 & 2, and see ಹನ್ನೆ). [ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು Bv. 190; Cv. 9]. ಹಮ್ಮು ಮುಱಿದ ಮೇಲೆ ಗುಮ್ಮ ನಾದ. — ದಮ್ಮು ಕಟ್ಟಿ ಕೊಣ್ಡು, ಹಮ್ಮು ಕಳ ಕೊಣ್ಡ. — ಬಿಮ್ಮಗೆ ಹಿಡಿದರೆ ಹಮ್ಮು ಹೋಗದೇ? (Prvs.).

**ಹಮ್ಮುಗಾತಿ hammu-gāti.** a proud woman (My.).

**ಹಮ್ಮುಗಾಱ hammu-gāṟa.** a proud man (My.).

**ಹಮ್ಮುಗೆ hammuge.** a rope, a band (C. Bp. 41, 46; Bh. 8, 24, 25). ಹಮ್ಮುಗೆಯು ಕುಣಿಕೆಗಳು (ಸಂಕಟಿಕ Mr. 292).

**ಹಯ್ hay.** a child. (T. ಪಜ). see ಹಯ್ಕಳು.

**ಹಯ haya.** *a horse* (ಕುದುರೆ Nn. 8). 2, the number seven (that being the number of the horses of the sun, ಏಱು Mr. 347). see Prv. s. ಹನ್ದಿ.

**ಹಯಗ್ರೀವ haya-grīva.** N. of a daitya who seized and carried off the vēdas. (Bhāgavata 8, 23, 17). 2, N. of a form of Viṣṇu.

**ಹಯಘೋಷ haya-ghōṣa.** neighing. see ಕಿಳಿಱು.

**ಹಯಜ್ಞತೆ haya-jñate.** knowledge of horses and their management, horsemanship. (My.).

**ಹಯತತಿ haya-tati.** the number seven (Ch.).

**ಹಯಧ್ವನಿ haya-dhvani.** neighing. see ಕಿಳಿಱು.

**ಹಯನ hayana.** *a covered carriage or palanquin* (ರಥದ ಹರಿ Hlā.).

**ಹಯನಿಕರ haya-nikara.** the number seven (Ch.).

**ಹಯನು hayanu.** = ಪಯ 2, ಪಯ್ನು, etc. milk and all that is made of milk, as curds, butter, etc. dairy products. 2, a milch cow. see Sp. s. ಗೊಡ್ಡು. 3, water: the crop that is raised by means of tank water of which the planting begins in January (My.). see Prv. s. ಹೊಗಱಿಸು. — ಹಯನುಗದ್ದೆ. lands for raising the hainu crop (My.). — ಹಯನುಬತ್ತ. the paddy of the hainu crop (My.). — ಹಯನುಬೆಳೆ. the growing hainu crop (My.).

**ಹಯಪರಿಕರ haya-parikara.** a horse-girth. see ಬಿಗಿ.

**ಹಯಪುಚ್ಛಿ haya-pucchi.** *the plant Glycine debilis* Lin.

**ಹಯಪ್ರಾಸ haya-prāsa.** a kind of alliteration (Ch.).

**ಹಯಮಣ್ಡಲಿ haya-maṇḍali.** a ring or circular motion of horses. see ವೇಡೆಯ.

**ಹಯಮಾರ haya-māra.** *the fragrant oleander, Nerium odorum* Ait. see ಕಣಗಲ.

**ಹಯಮಾರಕ haya-māraka.** *the fragrant oleander.* see ಕಣಗಿಲೆ.

**ಹಯಮೇಧ haya-mēdha.** the horse-sacrifice. (J. 2, 47. 55; 14, 31; 20, 2).

**ಹಯರಕ್ಷೆ haya-rakṣe.** the guarding or watching of a horse or of horses (J. 10, 17).

**ಹಯವದನ haya-vadana.** (= ಹಯಗ್ರೀವ). N. of a form of Viṣṇu (My.).

**ಹಯವಾಹನ haya-vāhana.** Rēvanta; Kubēra. (R.).

**ಹಯವ್ರಾತ haya-vrāta.** the number seven (Ch.).

**ಹಯಾಗಮನ haya-āgamana.** the arrival of a horse (J. 17, 19).

**ಹಯಾರೂಢ haya-ārūḍha.** mounted on a horse; a horse-man, a rider. (J. 7, 8; 29, 39; 31, 43).

**ಹಯಾರೋಹ haya-āroha.** *mounted on horseback, a rider;* horsemanship, riding.

**ಹಯಾರ್ಜುನರುಕ್ haya-arjuna-ruk.** shining like a white horse (Bp. 38, 1).

**ಹಯಿಲು hayilu.** = ಅಯಿಲು q. v., ಅಯ್ಲು, ಹಯ್ಲು. bewilderment, etc. (My.).

**ಹಯಿವ hayiva.** = ಹೈವ, q. v. N. of a tree.

**ಹಯ್ಕಳು haykaḷu.** (fr. ಹಯ್). = ಹಕ್ಕಳು. male or female children (My.; T. ಪಜಗಳ್; see ಪಸುಳೆ, etc.).

**ಹಯ್ದ hayda.** a boy (My.). *cf.* ಹಯ್.

**ಹಯ್ನ hayna.** = ಹಯನು, ಹಯ್ನು. milk, curds, butter, etc. ದನ ಕಱುಗಳು ಬಹಳ ಇದ್ದವು, ಹಯ್ನವೂ ಸಮೃದ್ಧಿಯಾಗಿತ್ತು (B. 4, 220). ಹಿನ್ದುಸ್ಥಾನದ ನೆರನಾಡುಗಳ ಕೆಲವು ಜನರಿಗೆ ಹಯ್ನವು ಬೇಕಾಗಿಲ್ಲ (5, 20).

**ಹಯ್ನು haynu.** = ಹಯ್ನ, etc. (C.). ಜೋಳದಾ ಬೋನಕ್ಕೆ ಬೇಳೆಯಾ ತೊಗೆಯಾಗಿ, ಕಾಚಿಮ್ಮ ಕಱೆದ ಹಯ್ನಾಗಿ, ಬೆಳವಲದ ಹವಣಂ ನೋಡು! (Sp.). ಆಕಳ ಹಯ್ನು ತುಸು, ಆದಾಗ್ಯೂ ಬಹು ಆರೋಗ್ಯವು (B. 1, 21).

**ಹಯ್ಯಂಗವೀನ hayya-ṅ-gavīna.** = ಹೈಯಂಗವೀನ, q. v. fresh butter. (ನವನೀತ, ಬೆಣ್ಣೆ Mr. 183).

**ಹಯ್ಲು haylu.** = ಹಯಿಲು, etc. bewilderment. (My.).

**ಹರ hara. 1.** (fr. ಹರೆ 1). spread, extent: broadness, breadth (C.). ಆಲದ ಎಲೆಗಳು ಹರವಿರುವದಱಿನ್ದ ಪತ್ರಾವಳಿಗೆ ಬರುತ್ತದೆ (B. 2, 22). ಒಣ್ಟೆಯ ಅಂಗಾಲು ಹರವಾಗಿ, ಬಹು ಮೆತ್ತಗೆ ಇರುತ್ತವೆ (3, 64). ಒನ್ದು ಹರವಾದ ಹಲಿಗೆ (4, 225). 2, spreading, becoming public. see ಹರವಡಿ.

**ಹರ hara. 2.** (fr. ಹರಿ 1). = ಹರಿ 3, ಹರು, ಹರ್. running, etc., flowing. — ಹರದಾರಿ. the way or distance a man can run, three English miles (My.; B. 3, 65; ಕ್ರೋಶ G.; Te. ಪರುಗು). ಎರಡು ಹರದಾರಿ (ಗವ್ಯೂತಿ G.); ನಾಲ್ಕು ಹರದಾರಿ (ಯೋಜನ G.). — ಹರದಾರಿಯಳತೆ. -ಅಳತೆ. the measure or distance of a haradāri (Bp. 26, 32). — ಹರನಾಳಿಗೆ. = ಹರಿ-. a gutter, etc. ನೀರ ಹರನಾಳಿಗೆ (ಕಾಷ್ಠಾಮ್ಬುವಾಹಿನಿ, ಪ್ರಣಾಲ G.).

**ಹರ hara.** 1. bringing, conveying, carrying; taking, seizing; captivating; removing, taking away, depriving of; dividing; destroying; a seizer, etc. see ಕಾಮ-, ಪುರ-, ಪ್ರ-, ಪ್ರಾಗ್ರ-, ಪ್ರಾಣ-, ಮನೋ-, ವಾತಾರ್-, ಸನ್ದೇಶ-. 2, *Śiva.* 3, force, etc. (ಪ್ರಸರ, ಬಲುಹು Mr. 461; perhaps mistake for ಹಠ). 4, sign of a metrically long syllable (Ch.; Mr. 363). 5, the number eleven (Ch.). ಕರ್ಮದಿನ್ದವೆ ಹರನು ಚರ್ಮವ ತಾನುಟ್ಟನು, ಹೊಮ್ಮರಾಳನ್ ಅಜನ್ ಆದನು, ಗೋವಿನ್ದನ್ ಎಮ್ಮೆಯ ಕಾದಂ (Sp.). ಸಿರಿಯಿದ್ದವಗೆ ನರೆ ಬನ್ದರೆ ಹರನಾದಾನೇ? (Prv.).

**ಹರ hara.** 2. Tbh. of ಪರ 1. opposite, etc. see ಹರವಸ.

**ಹರ hara.** 3. every (My.; Mhr., H.).

**ಹರಕತ harakata.** = ಹರಕತ್ತು, ಹರಕತ ಮಾಡೋಣ (ವಾರಣ Cb.).

**ಹರಕತ್ತು harakattu.** opposition; any measure or act in prevention; hindrance (My.; Mhr., H. ಹರಕತ).

**ಹರಕಾರ harakāra.** a courier (Mhr., H. ಹರಕಾರಾ; Br., R.).

**ಹರಕೆ harake.** = ಪರಕೆ 1, etc. a blessing, a benediction ಸ್ವಸ್ತಿ, ಆಶಿಸ್ Nr.; Bp. 4, 46; 5, 37; 32, 13. 43; 46, 17. 37; ಆಶಿಸ್, ಆಶೀರ್ವಾದ G.). 2, a vow (My.; ದೇವರಿಗೆ ಬೇಡಿಕೊಣ್ಡು ಕುಱಿ ಕೋೞಿ ಮುನ್ತಾದ್ದು ಕೊಡುವದು S. Mhr.). [ಹಬ್ಬಕ್ಕೆ ತನ್ದ ಹರಕೆಯ ಕುಱಿ ತೋರಣಕ್ಕೆ ತನ್ದ ತಳಿರ ಮೇಯಿತ್ತು Bv. 129]. — ಹರಕೆ ಕಟ್ಟು.

to tie money or ornaments in cloth coloured with turmeric and put them before an idol, vowed as a gift in case of delivery or recovery (My.). — ಹರಕೆ ಕೊಡು. to give a blessing, to bless (B. 5, 126. 165). 2, = ಹರಕೆ ತೀರಿಸು (My.). ಹರಕೆ ಕೊಟ್ಟರೂ ಹರಿಯೋದು ನಿಲ್ಲಲಿಲ್ಲ. — ದೊರಕಿದರೆ ಹರಕೇ ಕೊಡಬಹುದು (Prvs.). — ಹರಕೆಗೊಳ್. = ಪರಕೆಗೊಳ್. (Bp. 13, 7; 46, 43). — ಹರಕೆ ತೀರಿಸು. to make over to an idol what has been vowed (My.). — ಹರಕೆ ಮಾಡು. to make a vow, to vow (My.). — ಹರಕೆ ಹರಸು. = ಹರಕೆ ಮಾಡು. (My.).

ಹರಗಣ **hara-gaṇa.** a class of Kannaḍa metrical feet (Ch.).

**ಹರಗಣೆ haragaṇe.** the act of removing superfluous standing corn by means of the kunṭe; lumber.

ಹರಗಿರಿ **hara-giri.** Kailāsa. (Bp. 44, 43; Bh. 1, 14, 5).

**ಹರಗು haragu. 1.** to do work with regard to corn (ಸಸ್ಯಕ್ರಿಯೆ Śmd. Dh.) : to remove superfluous standing corn by means of the kunṭe (My.); to clean (a field) by removing the grass, weeds, etc. from it with the kunṭe before sowing (S. Mhr.). ಎತ್ತುಗಳನ್ನು ಹೊಲ ಹರಗುವದಕ್ಕೆ ಹಚ್ಚುತ್ತಾರೆ (B. 3, 18). ಆವರಿಗೆ ಹೊಲಾ ಹರಗುವದೂ ಬಿತ್ತುವದೂ ಅವಶ್ಯವಿಲ್ಲ (3, 111). ಅವರು ಅಲ್ಲಿಯ ಭೂಮಿಯನ್ನು ಹರಗಿ, ಅದಙಿಯೊಳಗೆ ಬಿತ್ತಲಾಗಿ (5, 129). ಹರಗದ ಹೊಲ (ಅಪ್ರಹತ); ಹರಗಿದ ಹೊಲ (ಕೃಷ್ಟ); ಮೂಱು ಸಾರೆ ಹರಗಿದ ಹೊಲ (ತ್ರಿಹಲ್ಯ G.).

**ಹರಗು haragu. 2.** the act of doing work with regard to corn, etc. — ಹರಗುವಾಳ್. -ಬಾಳ್. (Śmd. I). the iron used for it.

**ಹರಟು haraṭu.** to talk idly, to prate, to blab (My.; T. ಅರಜು, ಅಲಟ್ಟು).

**ಹರಟೆ haraṭe.** idle talk, prate, jabber, babble (C.; Tu.; T. ಅಲಟ್ಟು; see ರಟ್ಟೆ). ಬಾಲಕನ್ಯಾಸಿಗೆ ಹಾಱುಹರಟೆ ಯಾಕೆ? — ಒರಟನಿನ್ದ ಹರಟೆ ಉಣ್ಟಾಗುವದು (Prvs.). ಹರಟೆಯಿನ್ದ ಹೊತ್ತು ಕಳದೆ ನಾ (Dp. 29, 2). — ಹರಟೆ ಕೊಚ್ಚು. = ಹರಟು. (B. 4, 49. 194; 5, 96). — ಹರಟೆಮಲ್ಲ. a male great prater, etc. (My.). — ಹರಟೆ ಮಲ್ಲಿ. a female great prater, etc. (My.).

**ಹರಟೆಗಾಱ haraṭe-gāṟa.** an idle talker, a tattler, a prater (My.).

**ಹರಡಿ haraḍi.** = ಹರಡು 3, etc. the protuberant ends of the radius and ulna above the wrist; the ankle; the wrist. (My.). 2, a bracelet for the wrist composed of alternate gold and coral beads (My.). — ಹರಡಿಗುಣ್ಡು. = ಹರಡಿ No. 2. (My.).

**ಹರಡು haraḍu. 1.** = ಪರಡು 2, etc. to spread, etc. (v. t., ಪ್ರಸಾರಣ, ಪ್ರಸಾರ Śmd. Dh.; My.); to spread, etc. (v. i., My.). ಹರಡಿಕೊಳ್ಳುವದು (ವಿಸೃತ್ವರ, ವಿಸೃಮರ, ಪ್ರಸಾರಿ, ವಿಸಾರಿ Si. 361); ಬಹಳವಾಗಿ ಹರಡಿಕೊಳ್ಳುವಿಕೆ (ಪ್ರಪಂಚ, ವಿಸ್ತರ 412).

**ಹರಡು haraḍu. 2.** = ಪರಡು 3. to scratch with the fingers or nails, to claw (ಅಂಗುಲಿಖನನ Śmd. Dh.).

**ಹರಡು haraḍu. 3.** = ಪರಡು 4, ಹರಡಿ, ಹರಡೆ 2. the ankle (ಶರೀರಾಂಗಭೇದ, ಗುಲ್ಫ Śmd. Dh.; ಘುಣ್ಟಕ, ಗುಲ್ಫ Hlā., Mr. 332; Bp. 39, 34; My. exactly = ಹರಡಿ No. 1). ಪಾಪದ ಹರಡುಗಳೆರಡೂ (ಘುಂಟಿಕೆ, ಗುಲ್ಫ); ಆ ಹರಡುಗಳೊಳಗಣ ಮೆಯಿ (ಪಾರ್ಷ್ಣಿ Nr.).

**ಹರಡೆ haraḍe. 1.** = ಪರಡೆ. the Numidian crane (ಕರ್ಕರ ರೇಟು, ಕರೇಟು Nr.; ಗುಲ್ಫಿ Mr. 175; Bh. 1, 20, 53; 3, 4, 33; Te. పెగ్గడి). ಹರಡೇ ಹಕ್ಕಿ (ಲೋಹಪೃಷ್ಠ, ಕಂಕ Si. 172).

**ಹರಡೆ haraḍe. 2.** = ಹರಡಿ, etc. ಹೆಜ್ಜೇ ಹರಡೆ (ಘುಂಟಿಕೆ, ಗುಲ್ಫ Si. 207). 2, = ಹರಡಿ No. 2 (S. Mhr.).

ಹರಡೆ **haraḍe.** = ಅರಳೆ, ಅಲ್ಲೆ, ಹರ್ಡೆ, ಹಲ್ಲೆ. the ink-nut tree (= ಅಣಿಲೆ My.; H.).

ಹರಣ **haraṇa. 1.** taking; accepting, receiving; making an agreement (ಸನ್ಧಿಕೃತ್ಯ, ಸನ್ಧಿಕಾರ್ಯ, ಸನ್ಧಾನ ಮಾಡುವುದು Nn. 165). 2, seizing, carrying off or away, removing; *stealing;* withholding, annulling. 3, killing (ಕೊಲೆ 165). 4, disregarding; what is undesirable (ತನ್ನಿಚ್ಛೆಗಂ ಬಾರದುದು, ತನ್ನಿಚ್ಛೆಗೆ ಬಾರದ ಕಾರ್ಯ 165). 5, *a nuptial present.* 6, a gift to a student at his initiation.

ಹರಣ **haraṇa. 2.** Tbh. of ಪ್ರಾಣ. life, etc. (Śmd. 336; ಪ್ರಾಣ, ಜೀವ Nn. 165; Bp. 4, 63; 5, 66; 30, 24; 45, 3; B. 1, 25). [ಹರಣ ಮಾತ್ರಮಿನ್ನಪ್ಪವನುಂ ಸದಭಿಮತ ಕಾವ್ಯ ಪದವಿಧಿ ವಿದೂರಗತಮಾಗೆ Kr. 1, 83]. ಹರಣ ಉೞಿಯೋದಾದರೆ ಮರಣಕ್ಕೆ ಅಂಜೆನು. — ಪುರಾಣಾ ತಿಳಿದವನಾದರೆ ಹರಣ ಉೞಿಸಲಿ! (Prvs.). — ಹರಣಕೆ ಹರಣಂ ತರ್. to give (one's) life for the life (of another, Bp. 13, 13). — ಹರಣ ಕೊಡು. to restore life (Bp. 46 sum.; 46, 78; 50, 61). 2, to give one's life (13, 13). — ಹರಣಂಗಳೆ. -ಂ-ಕಳೆ. to give up one's life, to die (Śsv. 3, 35 va.). [— ಹರಣಂಗೆಯ್. -ಂ-ಕೆಯ್. to live. ತಲೆ ಸಿಡಿಲ್ದೊಡಮಾ ಕಾಯ್ಪಾಱದೆ ಹರಣಂಗೆಯ್ದುವು ಜಾಱಲ್ಲದೆ ಜೋದರಟ್ಟೆಗಳ್ ಕೆಲವಾಗಳ್ Pb. 10, 95]. — ಹರಣದ ಹರಣ. the life of life (Bp. 15, 31). — ಹರಣ ಪಡೆ. to obtain life (Bp. 32, 50; 37 sum.; 47 sum.; 50, 20). — ಹರಣಪ್ಪಡೆ. -ಂ-ಪಡೆ. to obtain or restore life (V. 31, 24 va.). — ಹರಣವೀ. -ಈ. to restore life (Bp. 28, 68). — ಹರಣ ವೊದಗಿಸು. -ಒದಗಿಸು. to restore life (Bp. 54, 74). — ಹರಣ ಹಿಡಿ. to keep one's life, to remain alive (Bp. 42, 32).

ಹರಣದೇಹಾರ್ಥ **haraṇa-dēha-artha.** life, body and property (Bp. 39, 17).

ಹರತಾಳ **haratāḷa.** Tbh. of ಹರಿತಾಲ. yellow orpiment (Cb. 170; Mhr.). 2, cessation of routine work.

**ಹರತೆ harate.** (= ಹರಗಣೆ). the act of removing superfluous standing corn by means of the kunṭe (My.).

**ಹರದ haradu₁-a₃.** = ಪರದ. a dealer, a trader, a merchant (ಪಣ್ಯಾಜೀವ, ವಣಿಜ್, ಪ್ರಾಪಣಿಕ, ನೈಗಮ, ವೈದೇಹ Hlā.; ವೈದೇಹಕ, ಸಾರ್ಥವಾಹ, ನೈಗಮ, ವಾಣಿಜ, ವಣಿಜ್, ಪಣ್ಯಾಜೀವ, ಆಪಣಿಕ, ಕ್ರಯವಿಕ್ರಯಿಕ Nr.; Bp. 8, 9; 25, 27; Rām. 5, 8, 49). [ಗರೆಯಿಲ್ಲದ ಕೋಲಿನಲಿ ಉದರೆಯನಿಕ್ಕಿದ ಭಣ್ಡದ ಹರದನನ್ತಾದೆನಯ್ಯಾ Bv. 938; Cv. 346]. ಪಡಿಯಾಸೆ ಹರದಂಗೆ, ನುಡಿಯಾಸೆ ವೇಶೆಗೆ, ಜೆಡೆಯಾಸೆ ಬೂದಿಗೊರವಗೆ, ಹಾದರಕೆಯೆಡೆಯಾಟದಾಸೆ (Sp.). ಹರದನ ಕುದುರೆಗೆ ಹಱಕು ಜೀನ. — ಹರದರ ವರಾತ ಎನ್ದು, ಹರವಿಯಲ್ಲಿ ತಲೇ ಅಡಗಿಸಿದ ಹಾಗೆ. — ಬಾರದ ಬರಹ ಹರದರಲ್ಲಿ ಸಿಕ್ಕೀತೇ? — ವರದಿ ಹೇಱುವವನಿಗಾದರೂ ಹರದನ ಹಂಗು ಬೇಕು. — ಸುತ್ತಿಗೆ ಇಲ್ಲದ ಹರದ, ಅತ್ತಿಗೆ ಇಲ್ಲದ ಮಯ್ದುನ (Prvs.). — ಹರದನ ಹಳ್ಳಿ. N. of a village in Mysore (My.).

ಹರದಿ **haradi.** (fr. ಹೃದ್ಯ, she who is dear, etc.?). a woman; a bride; a wife. (Dp. 116, 31; 128, 41).

**ಹರದಿಕೆ haradike.** trade, traffic (ವಾಣಿಜ್ಯ, ವಣಿಜ್ಯೆ Nr.).

**ಹರದು haradu. 1.** trade, traffic (ವಣಿಜ್ಯ, ವಾಣಿಜ್ಯ, ವಣಿಜ್ಜೆ Hlā.; ವಾಣಿಜ್ಯ Mr. 346). see ಎಲೆವರದು. — ಹರದುಗೆಯ್. = ಪರದು-. to trade (ಬೇಹಾರವಂ ಮಾಡು Śmd. 240 Cm.).

**ಹರಡು haradu. 2.** = ಹರೆದು. P. p. of ಹರೆ 1. (My.).

**ಹರಪ್ರಿಯ hara-priya.** Kubēra (Cpr. 9, 68).

**ಹರಯ haraya.** = ಹರೆಯ. Tbh. of ಪ್ರಾಯ (Śmd. 336). age.

**ಹರವಡಿ hara1-paḍi 1.** the state of becoming public or manifest; manifestation; display, parade (ಗಾಡಣ, ದೋಹಿಲ್, ಪ್ರಕಟ Kk. 52).

**ಹರವರಿ hara1-pari 3.** = ಹರವಡಿ. (ಗಾರಣ, ದೋಹಿಲ್, ಪ್ರಕಟ Ss.). ಹರಿಣಂಗಳ ಹರವರಿ (Cpr. 5, 45).

**ಹರವಶ hara-vaśa.** Tbh. of ಪರವಶ (Śmd. 342). loss of self-control or consciousness, etc. (ಮುಚ್ಚೆ, ಮೂರ್ಛೆ Kk. 31; ಮುಚ್ಚೆ, ಜೊಂಗುಳಿ, ಮೂರ್ಛೆ Śm. 56; Cpr. 6, 84; 8, 71). [— ಹರವಶ ಮ್ಪೋಗು. -ೂ-. ಪೋಗು. to lose self control, to lose consciousness. ಇನ್ನಿವನಱಿದು, ಮಱೆದು, ಹರವಶಮ್ಪೋಗಿ ಹೊಯಿ ಹೊಡೆದನ್ನಿ ದ್ದಡೆ ಕೂಡಲ ಚನ್ನ ಸಂಗಯ್ಯನಲ್ಲಿ, ಅವರ ಶೀಲವನ್ತರೆಮ್ಬೆ Cv. 496].

**ಹರವಿ haravi.** = ಪರವಿ, ಹರಿಬಿ, ಹರಿವಿ, ಹರುಬಿ, ಹರುವಿ. an earthen water-vessel of the form of the koḍa, but larger [; any round-bottomed large vessel]; (ಘಟ, ಕರೀರ Hlā.; ಘಟ, ಕರಿರ Mr. 209; ಘಟ, ಪರವಿ Nr.; ಅಲಂಜರ G.; C.; Bp. 10 sum.; 14, 12; 22, 64; 30, 14; 38, 33; 51, 57; 55, 29; Bh. 1, 10, 25. 30). ಹರವಿಯ ಅನ್ನದಲ್ಲಿ ಒನ್ದು ಅಗಳು ನೋಡಿದರೆ ಸರಿ. — ಮುರುವಿಗೆ ಬಗೆ ಇಲ್ಲದಿದ್ದರೆ ಹರವಿಗೂ ದರಿದ್ರವೇ? (Prvs.). see Prv. s. ಹರದ.

**ಹರವು haravu.** (= ಹರಹು 1), ಹರ್ವು 1. to spread (v. i., My.). ಎಲ್ಲ ಕಡೆಯಲ್ಲಿಯೂ ಹರವಿ ಕೊಳ್ಳೋಣ (ಸಮ್ಮೂರ್ಛನ, ಅಭಿ ವ್ಯಾಪ್ತಿ Si. 387). ಹರವಿದನ್ತಾದ್ದು (ಕೀರ್ಣ, etc. Dhw.). 2, to spread, to spread out (v. t., My.; B. 3, 106; 4, 158).

**ಹರಸಮಯ hara-samaya.** a śaiva congregation (Bp. 50, 22).

**ಹರಸು harasu.** = ಪರಸು, ಹರಿಸು 1. to bless (as a devotee blesses Śiva, Bp. 9, 36; as a yati a śivabhakta, 32, 14 43; as a śivabhakta others; 32, 50; 46, 7. 10. 14. 15. 16; as Sītā Hanumat, Rām. 5, 8, 89; as parents their children, Prll. 3, 12. 26; Bh. 1, 10, 26; B. 1, 6; as a blind man his benefactor, B. 3, 124; as a king his relations, Bh. 2, 13, 10; see Bp. 32, 44; according to My. custom the giver of a blessing always ought to be either older or of a higher position than the receiver of it). 2, to make a vow (Bp. 48, 18; Bh. 1, 13, 3; ದೇವರಿಗೆ ಹರಸುವದು My.). ಹರ ಸೋದು ತಪ್ಪೋದಿಲ್ಲ, ತಿರಿದುಮ್ಬೋದು ಹೋಗೋದಿಲ್ಲ. — ತನ್ನ ಕಾಲಿಗೆ ತಾನೇ ಶರಣು ಮಾಡಿ ಹರಸಿ ಕೊಣ್ಡ ಹಾಗೆ (Prvs.). ಹರಸುವುದು (ಸ್ವಸ್ತಿ, ಆಶೀರ್ವಚ, ಆಶೀರ್ವಾದ Nn. 138).

**ಹರಸು harasu.** (= ಅರಸು?). — ಹರಸುಪಾದರೀ ಗಿಡ. a kind of plant. (ಪಾಟಲಿ, ಅಮೋಘೆ, ಕೃಷ್ಣವೃನ್ತೆ, etc. Si. 134).

**ಹರಹು harahu. 1.** = ಪರಪು, (ಹರವು). to spread, to spread out or about (v. i. and v. t.; see Grj. 9, 62; Bp. 58, 50; Bh. 3, 23, 10). ಹರಹಿದನ್ತಾದು (ಪ್ರಸರ, ವಿಕೀರ್ಣ Nn. 108); ಹರಹಿದುದು (ವಿತಾನ, ಪ್ರಸರ 115). ಹರಹಲ್ ಪಟ್ಟುದು (ವಿಸ್ತೃತ, ವಿಸ್ತೃತ, ತತ); ಅಗಲಕ್ಕೆ ಹರಹಲು ಪಟ್ಟುದು (ಪ್ರಸೃದ್ಧ, ಪ್ರಸೃತ Nr.). ಗಿಡ ಮನೆ ನೀರು ಮುನ್ತಾದ ಎಲ್ಲ ವಸ್ತುಗಳ ಮೇಲೆ ನಾನು ಪ್ರಕಾಶವನ್ನು ಹರಹು ತ್ತೇನೆ (B. 3, 27).

**ಹರಹು harahu. 2.** spreading, extension, expanse, vastness (Bh. 1, 12, 6; 3, 11, 16; Rām. 4, 7, 9; J. 33, 4). — ಹರ ಹುಗೆಡು. -ಕೆಡು. to become devoid of extension (ಅವಕುಂಚಿತ, etc. Mr. 451).

**ಹರಹು harahu. 3.** (= ಪರಿವು, ಹರಿವು 1). running, flowing, flow, current. ನೀರ ಹರಹು (ಅರ, ಧಾರೆ, ಪ್ರವಾಹ, ಓಘ, ವೇಣಿ Mr. 415). — ಹರಹುಬತ್ತು. -ಬತ್ತು. a current to dry up. ಹರ ಹುಬತ್ತಿದುದು, that by which a current has dried up.

**ಹರಳಿಗ haraḷiga.** = ಪರಳಿಗ, q. v. a paramour (ಜಾರ Śmd. II).

**ಹರಳು haraḷu.** = ಪರಲ್, etc., ಹಳ್ಳು 1. a nodule, a pebble, a stone, grit a precious stone (ಶರ್ಕರೆ Nr.; ಉಪಲ Nr.; My.; B. 4, 151). 2, that which bears kernels: the castor-oil plant, Palma Christi, Ricinus communis (My.). 3, the tree Terminalia tomentosa (? ಹೊನ್ನೆ Mr. 134). ಮೂತ್ರದ್ವಾರದಿನ್ದ ಹರಳು ಬೀಱುವ ರೋಗ (ಅಶ್ಮರಿ, ಮೂತ್ರಕೃಚ್ಛ್ರ G.). ದುರುಳನ ಕಣ್ಡರೆ ಹರಳು ಚೆಲ್ಲ ಬೇಕು. — ಒರಳಲ್ಲಿ ಹರಳು ಹುರಿದರೆ ಅರಳು ಆದೀತೇ? (Prvs.).—ಹರಳಪ್ಪ. -ಅಪ್ಪ. = ಹರಳು No. 2 (playfully used). see Prv. s. ಹಗಲುದೀವಟಿಗೆ. — ಹರಳು ಗಿಡ. = ಹರಳು No. 2. (ವ್ಯಾಘ್ರಪುಚ್ಛ, ಗನ್ಧರ್ವಹಸ್ತಕ, ಏರಣ್ಡ, ವರ್ಧಮಾನ, etc. Si. 134.148).—ಹರಳುಗುಣಿಮಣೆ. a tablet with fourteen holes for a game played with pebbles, etc. (My.).—ಹರಳುಂಗರ. -ಉಂಗರ. a ring set with one or more precious stones (My.; Si. 220). — ಹರಳುಂಗುರ. -ಉಂಗುರ. = ಹರಳುಂಗರ. (Bh. 1, 6, 37). — ಹರಳು ಹರಳು. rep. (B. 3, 45; 4, 204). — ಹರಳೆಣ್ಣೆ. -ಎಣ್ಣೆ. castor oil; lamp oil (as it is frequently used for burning in lamps, My.; Si. 134).

**ಹರಳೆ haraḷe.** = ಅರಳೆ 2, etc. dressed cotton. (My.).

**ಹರಳ್ಚು haraḷcu.** to cause hindrance or opposition to the eye, to annoy or trouble the eye (ನೇತ್ರವಿರೋಧಕರಣ Śmd. Dh.).

**ಹರಾಬಿ harābi.** = ಅರಾಬಿ. broad, etc. (My.; H.).

**ಹರಾಮಿ harāmi.** a wicked, vile woman (My.). 2, vile, base, villainous (Mhr., H. ಹರಾಮಿ).

**ಹರಾಮು harāmu.** unlawful; wicked, wrong; vicious, vile (My.; Mhr., H. ಹರಾಮು); forbidden. — ಹರಾಮುಕುದುರೆ. a vicious or restive horse (My.).

**ಹರಾಮುತನ harāmutana.** wickedness, etc. (My.).

**ಹರಿ hari. 1.** = ಪರಿ 1 q. v., etc. to run; to flow; etc. (ಧಾವನ Śmd. Dh.; Bp. 32, 20; 45, 28; 57, 2; J. 22, 36; 28, 16; Bh. 2, 4, 9. 11; C.). [ಮನವಿದು ವಿಷಯಕ್ಕೆ ಹರಿವುದು Bv. 34]. ಹರಿದು ಮುತ್ತುಹ (ಅಭ್ಯವಸ್ಕನ್ದನ, ಅಭ್ಯಾಸಾದನ); ಬೇಗದಿನ್ದ ಹರಿವಾತನು (ತರಸ್ವಿ, ತ್ವರಿತ, ವೇಗಿ, ಪ್ರಜವಿ, etc.), ಹರಿದು ಹೋಹಾತನು (ಅತಿಜವ, ಜಂಘಾಲ); ಒಱತು ಹರಿವ ಹಳ್ಳ (ಸ್ರೋತಸ್); ನೀರ ಹರಿಯಲೀಯದೆ ಕಟ್ಟಿದ ಕಟ್ಟೆ (ಆಧಾರ); ಉದಕ ಹರಿವ ಬಟ್ಟೆ (ಪ್ರಣಾಲಿ Nr.). (ಆನೆ) ಹರಿವುದು (ಸ್ಥೂಲೋಚ್ಚಯ); ಸುತ್ತುಂಗಡಲು ಹರಿದ ಕುಱುವ (ಅನ್ತರೀಪ Hlā.). ಹಿರಿದು ಪಾಪವ ಮಾಡಿ, ಹರಿವ ನೀರೊಳು ಮುಱುಗೆ ಕರಗೋದೇ ಪಾಪ? (Sp.). ನಿಲ್ಲದೆ ಅತಿ ಹರಿವವಂ (ಜಂಘಾಲ, ವೇಗಿ Mr. 234). — ಹರಿದಾಡು. -ಆಡು. to run about (in a battle, J. 25, 46); to move about (as blood in the body, B. 3, 35; 4, 133); to creep about (as a serpent, Dp. 63, 3; B. 3, 97; as an ant, B. 4, 64). ಹರಿದಾಡುವ ಮನಸು (ಚಿತ್ತವಿಭ್ರಮ G.). — ಹರಿಯಿಡಿ. -ಇಡಿ. to beat (another) so that he runs away, to defeat, etc. ಹರಿಯಿಡಿದುದು (ಎಱಸಿದುದು, ಕಡೆಗಣಿಸಿದುದು, ಇಱುಸುನೂಕಿದುದು, etc., ಪ್ರತಿಹತ Ss.).

**ಹರಿ hari. 2.** = ಪರಿ 2. P. p. of ಹರಿ 1, in ಹರಿ ಹರಿದು (Bp. 32, 17; J. 26, 4). — ಹರಿ ತರ್. (*i. e.* ಹರಿದುಕೊಣ್ಡು ಬರ್). =

ಹರಿ ತರ್. (Bp. 5, 28; 20, 14; 22, 11; 44, 6; 46, 12; 53, 16; J. 28, 54; Bh. 1, 5, 21; 1, 10, 27). ಗಿರಿಯ ತುದಿಯಿನ್ದ ಒಸರಿ ಹರಿತಪ್ಪ ಹಳ್ಳ (ನಿರ್ಝರ Mr. 97).

**ಹರಿ hari. 3.** = ಪರಿ 3, ಹರ 2, ಹರು. running; a run; going; flowing. see ಜಲ–; Hlā. s. ಡಯನ. — ಹರಿಕಣಿ. = ಹರುಕಣಿ. a channel for (water) to run, a water-conduit (ಪಾನ, ಸಾರಣಿ Hlā.); a water-trench. ಮರಕ್ಕೆ ನೀರೆಱೆವ ಹರಿಕಣಿ (ಆವಾಲ, ಆಲವಾಲ Hlā.). — ಹರಿಗೂಡು. -ಕೂಡು. to pay money for being ferried over a river. ಹರಿಗೂಡುವುದು (ಅತರ Hlā.). — ಹರಿಗೊಳ್. -ಕೊಳ್. to run away (Bh. 4, 2, 19). — ಹರಿದಾರಿ. = ಹರದಾರಿ. (My.; Si. 105). — ಹರಿನಾಳಿ. a waste-pipe, a gutter, a channel (ಪ್ರಣಾಲಿ Hlā.; Mr. 422). — ಹರಿನಾಳಿಗೆ. = ಹರನಾಳಿಗೆ, ಹರಿನಾಳಿ. (S. Mhr.). — ಹರಿಯನ್ತರ. -ಅನ್ತರ. the area of a run, *i. e.* of a haridāri (Bh. 2, 13, 32). — ಹರಿಯಿಡು. -ಇಡು. to run, to hasten (Cpr. 8, 4 va.). — ಹರಿಹಲಿಗೆ. a plank to the one end of which a rope is fastened and on which a boy sits and is pulled along (Bh. 1, 6, 2).

**ಹರಿ hari. 4.** = ಪರಿ 4, ಪರೆ 1, ಹರೆ 1 (occasionally in MSS. and prints). to spread (v. i.), etc.; to disperse; to go away; to end (Bp. 45, 8. 47; J. 17, 28; 27, 38). ಗುರುರಾಯ ನುಪದೇಶ ದೊರಕೊಣ್ಡಿತಾದಡೇ ಹರಿವುದು ಪಾಪವೆನ್ತೆನಲು ವಜ್ರದಿಂ ಗಿರಿಯ ಹೊಯಿದನ್ತೆ (Sp.). see Sp. s. ಕಜ್ಜ. — ಹರಿಧಜ್ಜಕ. (ಹರಿದ ಹಜ್ಜಕ). = ಹರೆಧಜ್ಜಕ. a straggling herb with bur-like flowers that stick to hands and clothes, Pupalia cappacea Mog. (? Z.).

**ಹರಿ hari. 5.** (= ಹರಿಬ 1). spread, extent; a mass, a multitude, etc. (ಜಂಗುಳಿ, ಬಳಗ, ಬಮ್ಬಲ್, ಪಸರ, etc., ಶ್ರೇಣಿಕೆ Kk. 17).

**ಹರಿ hari.** green, greenish yellow, yellow. 2, *reddish brown, bay, tawny.* 3, of a shining white colour, white, bright (ಧವಲ, ಬಿಳಿದು Nn. 10; ಶುಭ್ರ Mr. 495). 4, *the sun* (ಅರ್ಕ, ಸೂರ್ಯ 10). 5, *the moon* (ಚನ್ದ್ರ 10). 6, *a ray of light* (ಅಂಶು, ಕಿರಣ 10). 7, water (ವಾರಿ, ಉದಕ 10). 8, gold (ಸುವರ್ಣ 10). 9, *a horse* (ತುರಂಗಮ 10). 10, *a lion* (ಸಿಂಹ 10). 11, a parrot (ಶುಕ, ಗಿಳಿ 10; ಗಿಳಿ 495). 12, *a peacock.* 13, a pigeon (ಪಾರಾವತ, ಪಾರಿವಾಳದ ಹಕ್ಕಿ 10). 14, *an ape* (ವಾನರ, ಕಪಿ 10). 15, *a frog* (ಭೇಕ, ಕಪ್ಪೆ 10). 16, *a snake* (ಅಹಿ, ಸರ್ಪ 10). 17, the ocean (ಅಬ್ಧಿ 10). 18, a point of the compass (ದಿಕ್, ದಿಕ್ಕು 10). 19, an arrow (ಅಮ್ಬು, ಬಾಣ 10). 20, a treasury (ಕೋಶ, ಭಣ್ಡಾರ 10). 21, a cart, a waggon (ಶಕಟ, ಬಣ್ಡಿ 10). 22, *Indra* (ಬಿಡೌಜ, ಇನ್ದ್ರ 10). 23, *Viṣṇu, Kriṣṇa* (ಕಮಲಾಕ್ಷ, ವಿಷ್ಣು 10). 24, Śiva (ಫಣೀನ್ದ್ರ 495). 25, Brahmā. 26, *Yama* (ಯಮ 10). 27, *Vāyu* (ವಾಯು 10). 28, N. of the author of the girijākalyāṇa (Grj. 10, 113. 114). 29, one of the divisions (varṣas) into which the known continent is divided. 30, sign for a metrically short syllable (Ch.; Mr. 363). 31, the number eight (Ch.). see ಕಪಿ–; Bp. 54, 43. ಹತ್ತು ಭವನ ನೆತ್ತಿ, ಎತ್ತು ಎಮ್ಮೆಯ ಕಾದು, ಮುತ್ತು ಪಾಣ್ಡವರಿಗಾಳಾದ ಹರಿಯು ತಾನೆತ್ತಣ ದೈವ? (Sp.). ನರಸಿಂಹನವತಾರ ಹಿರಿದಾದದದುಬುತ; ಉಗರಿನ್ದ ಶರಭ ಕೊಲ್ಲುವಾಗ ಹರಿಯೂರನಱಿಯದನ್ದವಾದ (Sp.). ಹಿರಿಯ ಬೊಮ್ಮನು ಕೆಂಚ, ಕಿಱಿಯ ಹರಿ ತಾ ಕರಿಗ, ಹರಹರನು ಶುದ್ಧ ಧವಲಕನ್; ಇವರುಗಳು ಸರಿಯೆ ದೈವಕ್ಕೆ ? (Sp.). — ಹರಿಗಳಪ್ಪಣ್ಣ. -ಅಪ್ಪಣ್ಣ. Appaṇṇa, the son of a certain Hari (Bp. 56, 55), — ಹರಿ ಗಿರಿ. reit. (Grj. 6, 38; Bp. 54, 5). — ಹರಿಬುವ್ವ. a meal on the fourth day of a marriage (of smārtas or mādhvas) at which the son-in-law is looked upon as Viṣṇu, is waited on only by his mother-in-law, plays tricks with his eñjal, etc. (My.).

**ಹರಿಕಣ್ಠ hari-kaṇṭha.** a peacock (ನವಿಲ್ Mr. 168).

**ಹರಿಕಥೆ hari-kathe.** the story of Viṣṇu or Kriṣṇa (related with music and singing). ನರೀ ಕಥೆಯ ಮುನ್ದೆ ಹರಿ ಕಥೆಯೇ? (Prv.).

**ಹರಿಕಾನ್ತ hari-kānta.** the sapphire (ಅಸಿತಾಶ್ಮ, ನೀಲ Mr. 101).

**ಹರಿಕಾಱ hari-kāṟa.** = ಪರಿಕಾಱ. a runner, a courier (ಜಂಘಾಕರಿಕ, ಜಾಂಘಿಕ Nr.); a swift, fleet man (ಜಂಘಾಲ, ಜವನ, ವೇಗಿ Hlā.; ವೇಗಾಯಿಲ Ŝs.). 2, a hawker, a chandler ವಾರ್ತಾವಹ, ವೈವಧಿಕ Nr.). 3, a spy [ಹರಿಕಾಱರ ಜಂಗಮವೆನ್ದಡೆ, ನಾಯಕ ನರಕ ತಪ್ಪದು Cv. 501]; (ಉದಾಸ್ಥಿತ, ಚರಭೇದ Nr.).

**ಹರಿಕೆ harike. 1.** = ಪರಕೆ 1, ಹರಕೆ. a vow (My.); etc. ನರಕದಲ್ಲಿ ಬೀಱುವವನು ಹರಿಕೆ ಹೇಱಿದರೆ ತಪ್ಪೀತೇ? — ತಿರಿಕೆಯ ಕೂಱು ತಿನ್ದು, ಹರಿಕೆಯ ಕೋಣನಾದ (Prvs.).

**ಹರಿಕೆ harike. 2.** = ಹಲಕು 3, ಹಲಿಕೆ. a kind of harrow (ಕೋಟೀಶ, ಲೋಷ್ಟಭೇದನ Hlā.; *cf.* ಹರಗು 1).

**ಹರಿಗಣ hari-gaṇa.** a class of Kannaḍa feet (Ch.).

**ಹರಿಗು harigu.** = ಅರಗು 1, etc. a margin, etc. (Si. 101; *only* in Si.).

**ಹರಿಗೆ harige.** = ಪರಿಗೆ, etc. Tbh. of ಫಲಕ. a shield (ಖೇಟಕ, ಫಲಕ, ಚರ್ಮ, ಆವರಣ Hlā.; ಫಲಕ, ಫಲ, ಫರ, ಚರ್ಮ Nr.; ಫಲಕ, ಖೇಟಕ, etc. Mr. 292; ನಸು, ಖೇಟಕ Nn. 17; ಅಡ್ಡಣ Ct. II, 38; Kk. 40; Śm. 43; Grj. 7, 52; Bp. 61, 25).

**ಹರಿಗೆಕಾಱ harige-kāṟa.** a man who carries a shield (Grj. 6, 56 va.).

**ಹರಿಚನ್ದನ hari-candana.** *a sort of yellow sandal-wood* (ಬರ್ಬರ Mr. 335). 2, *one of the five trees of svarga* (see ದೇವತರು).

**ಹರಿಣ hariṇa.** *greenish or yellowish white;* white. 2, *a deer, an antelope* (ಹುಲ್ಲೆ Mr. 162).

**ಹರಿಣಧರ hariṇa-dhara.** the moon (Bp. 5, 24).

**ಹರಿಣಧರಧರ hariṇadhara-dhara.** Śiva (Bp. 53, 46).

**ಹರಿಣಪಕ್ಷ hariṇa-pakṣa.** the light half of a month (Bh. 1, 3, 11).

**ಹರಿಣಾಂಕ hariṇa-aṅka.** the moon. (J. 25, 46). — ಹರಿಣಾಂಕ ಕುಲಜ. Arjuna (25, 46).

**ಹರಿಣಿ hariṇi.** *greenish, green* (ಗಿಳಿ ಪಸುಮ್ಪುಗಳ ಗಱಿಯನ್ತಪ್ಪ ವರ್ಣ Mr. 444). 2, *a female deer or antelope,* a doe (ಮೃಗ, ಎರಳೆ Nn. 95). 3, *a kind of woman.* 4, *a golden image* (ಪಾಂಚಾಲಿಕೆ, ಪುತ್ಥಳಿ 95). 5, a heap, collection, multitude (ಚಯ, ಸಮೂಹ 95; *cf.* K. ಹರಿಬ 1). 6, roundness (ವೃತ್ತ, ಬಟುಹು, ವೃತ್ತಭೇದ 95).

**ಹರಿಣೀಪ್ಲುತ hariṇi-pluta.** N. of a vṛitta (Ch.).

**ಹರಿತ್ harit.** *green;* the colour green. (ವರ್ಣ Nn. 93). 2, grass (ತೃಣ, ಹುಲ್ಲು 93). 3, beautiful (ರಮಣೀಯ, ಮನೋಹರ 93). 4, *a point of the compass, a quartar, region* (ದಿಕ್ಕು 93). 5, authority, etc. (ಅಧಿಕಾರ 93).

**ಹರಿತ harita.** *green;* the colour green (ಪಚ್ಚೆ Nn. 60); grassy, verdant.

**ಹರಿತಕ haritaka.** a green vegetable, *a pot-herb.*

**ಹರಿತಭಾವ harita-bhāva.** greenness. see ಪಸುರ್.

**ಹರಿತಾಯಮಾನ haritāyamāna.** becoming green or verdant (Cpr. 4, 49 va.).

**ಹರಿತಾಲ haritāla.** = ಅರದಳ, ಅರದಾಳ, ಅರಿದಳ, ಅರಿದಾಳ, ಹರತಾಳ, ಹರಿದಳ. *yellow orpiment or sulphuret of arsenic, Arsenicum fla[illegible]*

(ಹರಿತಾಲಕ, ಆಲ, etc., ಅರಿದಾಳ Nr.). 2, a kind of pigeon of a yellowish green colour.

**ಹರಿತಾಲಕ haritālaka.** = ಹರಿತಾಲ. *yellow orpiment.* 2, a kind of pigeon.

**ಹರಿತಾಲಿ haritāli.** *the grass Panicum dactylon* Lin. (or Agrostis linearis Retz., ದೂರ್ವೆ, ಕಱಿಕೆ Mr. 109).

**ಹರಿದಶ್ವ harit-aśva.** *the sun.*

**ಹರಿದಳ haridaḷa.** Tbh. of ಹರಿತಾಲ. (ಹರಿತಾಲಕ, etc. Si. 333).

**ಹರಿದಾಸ hari-dāsa.** a slave or worshipper of Viṣṇu; a celebrator of Viṣṇu in his incarnations who relates his exploits with music and chanting Dp. 63, 1 seq. (My.).

**ಹರಿದಿನ hari-dina.** = ಹರಿವಾಸರ. (Dp. 135 *a*, 13, 20).

**ಹರಿದಿವಸ hari-divasa.** = ಹರಿದಿನ. (Dp. 135 *a*, 14).

**ಹರಿದ್ರ haridra.** yellow colour (ರಜನಿವರ್ಣ, ಪೀತ Mr. 444).

**ಹರಿದ್ರಾಂಗ haridrā-aṅga.** a body to which turmeric is applied (J. 9, 42).

**ಹರಿದ್ರಾಭ haridrā-ābha.** resembling turmeric, *of a yellow colour, yellow.*

**ಹರಿದ್ರಾರಾಗ haridrā-rāga.** turmeric-coloured. 2, *unsteady in affection or attachment* (like the colour of turmeric which does not last, ಸ್ಥಿರವಲ್ಲದೆ ಸ್ನೇಹ ಮಾಡುವವನು Hlā.; *cf.* ಪೀತರಾಗ).

**ಹರಿದ್ರು hiri-dru.** *a kind of turmeric, Curcuma aromatica.*

**ಹರಿದ್ರೆ haridre.** ಹರಿದ್ರಾ. = ಅರಸಿನ, etc. *turmeric, Curcuma longa* Lin. (ಅರಿಸಿನ Mr. 130; *cf.* ಪಳದಿ). 2, the ink-nut tree (ಜೀವಕ, ಶಿವೆ, etc., ಅಣಿಲೆ Mr. 122).

**ಹರಿದ್ವಾರ hari-dvāra.** N. of a town and tīrtha where the Ganges finally leaves the mountainous districts for the level plains. (B. 5, 152; My.).

**ಹರಿನನ್ದನ hari-nandana.** Indra's son, Arjuna (J. 25, 46).

**ಹರಿನಮುಚಿಭಿದ್ hari-namucibhid.** the moon and Indra (Bp. 38, 1).

**ಹರಿನಾದ hari-nāda.** a lion's roar: a war-cry (J. 25, 46).

**ಹರಿನಾಮ hari-nāma.** the name or names of Viṣṇu. see Prv. s. ಟೊರೋ.

**ಹರಿನೀಲ hari-nīla.** the sapphire (Cpr. 1, 119).

**ಹರಿನೀಲಮಣಿ harinīla-maṇi.** = ಹರಿನೀಲ. (J. 26, 9).

**ಹರಿನ್ಮಣಿ harit-maṇi.** *an emerald* (ಪಚ್ಚೆ Hlā.).

**ಹರಿಪೀಠ hari-pīṭha.** a throne (My.).

**ಹರಿಪ್ರಾಸ hari-prāsa.** a kind of alliteration (Ch.).

**ಹರಿಪ್ರಿಯೆ hari-priye.** *Lakṣmī.*

**ಹರಿಬ hariba. 1.** (= ಹರಿ 5). a mass, a multitude, a number, a host, an assemblage (ತಂಡ, ಹಿಂಡು, ಸಾಲ್, ತೋಮ, etc., ಸಮೂಹ Śs.; Bh. 3, 19, 43. 45; 7, 1, 8).

**ಹರಿಬ hariba. 2.** (fr. ಹರಿ 1?). business, affair, work, concern (Cpr. 6, 26; Bh. 1, 5, 23; 4, 4, 45; 8, 3, 4; Rām. 4, 2, 25; J. 11, 12; 14, 4; 16, 26; 25, 46).

**ಹರಿಬನ್ಧು hari-bandhu.** Arjuna (ಫಲ್ಗುನ, etc. Mr. 264).

**ಹರಿಬಿ haribi.** = ಹರವಿ, etc. an earthen water vessel; any large round-bottomed vessel.

**ಹರಿಭಕ್ತ hari-bhakta.** a worshipper of Viṣṇu. (My.).

**ಹರಿಮನ್ಥ hari-mantha.** the tree Premna spinosa, the wood of which by attrition produces flame. see s. ಅತಿ ಮುಕ್ತಕ. 2, N. of a country.

**ಹರಿಮನ್ಥಕ hari-manthaka.** *the chick-pea, Cicer arietinum.*

**ಹರಿಮಯ hari-maya.** made of, or full of, gold (J. 25, 46).

**ಹರಿಯಕ್ಷ hari-yakṣa.** = ಹರ್ಯಕ್ಷ. a lion (ಸಿಂಹ Mr. 159; Rām. 6, 19, 17).

**ಹರಿಯಣ hariyaṇa.** = ಪರಿಯಣ, etc. a plate-like vessel of metal or wood (Bh. 4, 4, 37; Rām. 6, 55, 38). ಮರದ ಹರಿಯಣದೊಳ್ ಉಣ್ಣಂ (Śmd. 287).

**ಹರಿಯಾಣ hariyāṇa.** = ಹರಿಯಣ, etc. (Bp. 8, 14).

**ಹರಿಯಿಸು hariyisu.** = ಪರಿಯಿಸು. to cause to flow (My.).

**ಹರಿಯುವಿಕೆ hariyuvike.** running; flowing. (ನೀರಿನ ಹರಿಯುವಿಕೆ (G. 319).

**ಹರಿವಂಶ hari-vaṁśa.** the family of Kriṣṇa. 2, N. of a poem in Saṁskṛita. 3, N. of a poem in Kannaḍa by Guṇavarma (Śmd. 144). [4. Kriṣṇa story].

**ಹರಿವತ್ hari-vat.** *Indra.*

**ಹರಿವರ hari-vara.** N. of a vṛitta (Ch.).

**ಹರಿವರುಷ hari-varuṣa.** Tbh. of ಹರಿವರ್ಷ. (Cpr. 3, 32 va.).

**ಹರಿವರ್ಷ hari-varṣa.** one of the divisions of the known continent.

**ಹರಿವಾಣ harivāṇa.** = ಅರಿವಾಣ, ಹರಿಯಣ, etc. (C.; B. 4, 74; Te.). ಚಿನ್ನದ ಹರಿವಾಣವಾದರೂ ಮಣ್ಣಿನ ಗೋಡೆಗೆ ಒಱಗಬೇಕು. — ಹಂಚಿನಲ್ಲಿ ಉಣುವವನಿಗೆ ಹರಿವಾಣವು ಯಾಕೆ? — ಹಬ್ಬದ ಊಟ, ಹರಿವಾಣದ ವೀಳ್ಯ (Prvs.).

**ಹರಿವಾಲುಕ hari-vāluka.** *a perfume, the fragrant bark of Feronia elephantum.*

**ಹರಿವಾಸರ hari-vāsara.** Viṣṇu's day; the eleventh or twelfth lunar day when upavāsa, etc. is performed (J. 29, 26; My.).

**ಹರಿವಿ harivi.** = ಹರವಿ, etc. a large earthen water vessel. etc.

**ಹರಿವಿಷ್ಟರ hari-viṣṭara.** a throne (My.).

**ಹರಿವು harivu. 1.** = ಪರಿವು. running; flowing, streaming; current. [ಮುಟ್ಟೆ ಪ್ರಾಣಲಿಂಗದ ಹರಿವ ತೋಱಿಸಬೇಕೆಮ್ಬ ನಿಮಿತ್ತ, ಬೆಸನವಿಡಿದು ನಿಮ್ಮ ಕರುಣದ ಶಿಶುವಾಗಿ ಹುಟ್ಟಿದೆ ನಿಮ್ಮ ಕರಸ್ಥಲದಲ್ಲಿ Cv. 44]. ನದಿಯ ಹರಿವು (ಸ್ರೋತಸ್ Nr.).

**ಹರಿವು harivu. 2.** (fr. ಹರಿ 4). = ಹರೆವು. spreading, extending; increase; dispersing; going away; end; ruin (Bp. 27, 2; J. 26, 58; Bh. 1, 8, 30. 55; 7, 1, 2). — ಹರಿವೊಲೆ. -ಒಲೆ. an extensive, long fire-place built in the ground (My.).

**ಹರಿವೇಗ hari-vēga.** the velocity of the wind (J. 46, 25).

**ಹರಿಶರ hari-śara.** having Viṣṇu for an arrow: Śiva. (Śśv. 4, 122).

**ಹರಿಶ್ಚನ್ದ್ರ hari-ś-candra.** having golden-coloured splendor. 2, N. of a king of the solar dynasty. see J. 2, 52; 11, 30; 18, 54; Mr. s. ಅಱುವರ್.

**ಹರಿಸ harisa.** = ಹರುಷ. Tbh. of ಹರ್ಷ. joy, pleasure, etc. (ಸನ್ತಸ, ಸನ್ತೋಷ Śs.; see ಬೀಗು 2).

**ಹರಿಸು harisu. 1.** = ಹರಸು. to bless (B. 5, 190).

**ಹರಿಸು harisu. 1.** = ಅರಿಸು 3, ಪರಿಸು 1. to cause to run or flow (Bp. 21, 38; J. 4, 18. 27; 22, 25; Bh. 1, 10, 29; My.).

**ಹರಿಸು harisu. 3.** to cause to disperse, go away or end; to destroy. see *e. g.* ಸಾಲ-; Bp. 23, 22; 34, 31. 34; 54, 48; 57, 25. 28; Bh. 10, 6, 3.

**ಹರಿಸು harisu.** to remove, to take away, to carry off, etc.; to divide (ಭಾಗಿಸು Mr. 349). see *e. g.* ಅಪ–, ಪರಿ–, ಸಂ–.

**ಹರಿಸೇವೆ hari-sēve.** service or worship of Viṣṇu. ಹಾರುವರ ಮನೇಲಿ ಹರಿಸೇವೆ ಆದರೆ ಮೂಙನಾಯಿಗೆ ಓಡ್ಯಾಟ (Prv.).

**ಹರಿಹ hariha.** running; flowing, streaming; current. ತೊಱೆಯ ಹರಿಹ (ಓಘ, ಪ್ರವಾಹ, ವೇಣಿ, ಧಾರೆ, ಸ್ರೋತಸ್, ರಯ Hlā.).

**ಹರಿಹಯ hari-haya.** *Indra.*

**ಹರಿಹರ hari-hara.** the remover of Viṣṇu: Śiva (Bp. 54, 45; 57, 27. 28).

**ಹರಿಹು harihu.** running, run, velocity; flying. ಭಣ್ಡಿಯ (*i. e.* ಬಣ್ಡಿಯ) ಹರಿಹು (ಡಯನ, ಪ್ರವಹಣ Mr. 284).

**ಹರೀತಕಿ harītaki.** *the yellow myrobalan tree, Terminalia chebula* (ಅಣಿಲೆ Nn. 63, o. r. ಅಳಿಲೆ).

**ಹರು haru.** = ಹರಿ 2, etc. running; flowing. — ಹರುಕಣಿ. = ಹರಿಕಣಿ. a channel to carry off water (ಯಾನ, ಸಾರಣಿ Mr. 422). — ಹರುದಾರಿ. = ಹರಿದಾರಿ. ಎರಡು ಹರುದಾರಿ (ಗೋರುತ G.).

**ಹರುಬಿ harubi.** = ಹರವಿ, etc. an earthen water vessel. (My.).

**ಹರುಬು harubu.** Tbh. of ಪರ್ವ. a feast. ತಱುಬು ಇದ್ದರೆ ಹರುಬು ನಿನ್ನೀತೇ? (Prv.).

**ಹರುವಿ haruvi.** = ಹರುಬಿ, etc. (My.).

**ಹರುವು haruvu.** = ಹರ್ವು 2. a way, a means, an expedient (Bh. 1, 8, 21; 8, 26, 22; My.; Te.).

**ಹರುಷ haruṣa.** Tbh. of ಹರ್ಷ. joy, etc. (ಹರ್ಷ Nn. 155; ಸನ್ತಸ Ct. II, 64; Bp. 44, 70; 47, 30). ಪುರುಷನಾದರೆ ಹರುಷ ಬೇಕು (Prv.).—ಹರುಷ ತಾಳ್. to get joy, to begin to rejoice (Bp. 37, 24). — ಹರುಷಮ್ಬಡು. -ಒ-ಪಡು. to experience or feel joy (Bp. 11, 15; 37, 51; 52, 40). — ಹರುಷಮ್ಬೊಱು. -ಒ-ಪೊಱು. = ಹರುಷ ತಾಳ್. (Bp. 4, 58; 60, 33). — ಹರುಷವೊನ್ದು. - ಒನ್ದು. = ಹರುಷತಾಳ್ (Bp. 36, 30). — ಹರುಷ ಹೊದ್ದು. = ಹರುಷ ತಾಳ್. (Bp. 32, 45).

**ಹರುಷಿತ haruṣita.** Tbh. of ಹರ್ಷಿತ. delighted, etc. (Bp. 5, 58. 70; 21, 6; 22, 63; see ರೋಮ–). feminine ಹರುಷಿತೆ (44, 42).

***ಹರುಷಿತಿಕೆ haruṣitike.** pleasure. ಪರುಮಂಗಲ್ಲದೆ ಹರುಷಿತಿಕೆಯಿಲ್ಲೆನ್ನ ಕರಣಾದಿಗುಣಂಗಳ ಮಱೆದರು; Bv. 809. Sk. ಹರ್ಷ.

**ಹರುಸ harusa.** Tbh. of ಹರ್ಷ. pleasure, joy, etc. (Śmd. 335. 336).

**ಹರೆ hare. 1.** = ಪರೆ 1, ಹರಿ 4. to spread (v. i.), to extend; — to disperse, to go away; etc. (Bp. 21, 41; Rām. 3, 2, 24; Bh. 1, 5, 5; 8, 26, 56; B. 3, 125). P. ps. ಹರದು, ಹರೆದು. ಹರೆವ ಕತ್ತಲೆ (ಕ್ಷೀಣತಮಸ, ಅವತಮಸ Nr.). ಹರೆದ ಕತ್ತಲೆ (ಅವತಮಸ, ಕಡಿಮೆಯಾದ ಕತ್ತಲೆ G.). — ಹರೆಗಡಿ (*i. e.* ಹರೆಯಕಡಿ). = ಪರೆಗಡಿ, q. v. (Bh. 2, 1, 77; 8, 10, 38). — ಹರೆಗಡಿಸು (*i. e.* ಹರೆಯ ಕಡಿಸು). to have (a multitude) cut so that it disperses (Bh. 5, 3, 102). — ಹರೆಧಚ್ಚಕ. (*i. e.* ಹರೆದ ಹಚ್ಚಕ). — ಹರಿಧಚ್ಚಕ. a creeping perennial herb, Blepharis molluginifolia Pers. (Z.).

**ಹರೆ hare. 2.** = ಪರೆ 2. to begin to shine, to dawn (C., as ಬೆಳಕು–, ರಶ್ಮಿ–).

**ಹರೆ hare. 3.** dawn, break of day (C.).

**ಹರೆತನ haretana.** = ಹರೇತನ. youth (ತಾರುಣ್ಯ Cb.).

**ಹರೆಯ hareya.** = ಹರಯ. Tbh. of ಪ್ರಾಯ. the time of youth, the prime of life, maturity (Grj. 4, 57; Bp. 3, 41; 9, 33; 40, 15. 75; C.; B. 3, 51; 5, 238. 293). ಹರಯದ ಎತ್ತು (ಅರ್ಷಭ್ಯ, ಹೋರಿ, ಜಾತೋಕ್ಷ G.). see ಎಳೆವರೆಯ; ನಡುಹರೆಯ. ಹರೆಯ ಹೋದವಂ (ವೃದ್ಧ, ಸ್ಥವಿರ Mr. 310). ಹರೆಯಕ್ಕೆ ಸನ್ದಿ ಹಣವಡ್ಡ. — ಹಾಗೆ ಕುಣಿಯುವ ಬಡ್ಡಿ ಹರೆಯಕ್ಕೆ ಬನ್ದರೆ ಬಿಟ್ಟಾಳೇ? (Prvs.). — ಹರೆಯದವ. -ಅವ. a young man (My.; B. 5, 147). — ಹರೆಯದವಳು. -ಅವಳು. a young woman (My.; ಯುವತಿ G.). — ಹರೆಯಬೋಗುಹ. -ಪೋಗುಹ. the passing away of the prime of life, growing old, etc. (ಜ್ಯಾನಿ, ಜೀರ್ಣ Nr.). — ಹರೆಯಮ್ಬಡೆ. -ಒ-ಪಡೆ. to become ripe (Grj. 5, 76 va.). — ಹರೆಯಮ್ಪೋಗು. -ಒ-ಪೋಗು. the prime of life to pass away, etc. ಹರೆಯಮ್ಪೋದಾತ (ಪ್ರವಯಸ್, ಸ್ಥವಿರ, ವೃದ್ಧ, ಯಾತಯಾಮ Hlā.). — ಹರೇದವ. (*i. e.* ಹರೆಯದವ). a young man (ಯುವ Cb.). — ಹರೇದವಳು. -ಅವಳು. a young woman (ಯುವತಿ Cb.).

**ಹರೆವು harevu.** = ಹರಿವು 2. spreading; increase (see ಮುಸಿಸು–); dispersion, going away; end.

**ಹರೇಣು harēṇu.** *a sort of drug or medicinal substance* (= ರೇಣುಕಾ). 2, *pease, pulse* (= ಕಲಾಯ; ಬಟಗಡ್ಲೇ ಕಾಯಿ G.).

**ಹರೇತನ harētana.** = ಹರೆತನ. youth. (ಪ್ರಾಯ Cb.).

**ಹಱ haṟa. 1.** = ಹಱದು, etc. P. p. of ಹಱಿ 1, in ಹಱ ಕೊಳ್ಳು (C.; B. 3, 37; 4, 78. 170; 5, 250).

**ಹಱ haṟa. 2.** = ಪಱಿ 4, etc. flying; etc., etc. — ಹಱಗಲ್. -ಕಲ್. ಹಱಗಲು. = ಪಱುಗೋಲ್, etc. a round basket boat lined with leather, a boat made of wicker work covered with hides (My.). ಹಱಗಲುಕಡ. a ferry for such a boat (My.). — ಹಱಗೋಲ್. -ಕೋಲ್. ಹಱಗೋಲು. = ಹಱಗಲ್. (My.; ಪೋತ G.; B. 5, 298). ಕೆಸಱಿಗೆ ಹಱಗೋಲು ಬೇಕೇ? (Prv.).

**ಹಱಕ haṟaka. 1.** = ಹಱಕು, etc. rent or tattered or tousy state; a tatter, a rag. — ಹಱಕಬಟ್ಟೆ. a torn cloth (My.). — ಸಱಕ ಬಱಕ. reit. (My.).

**ಹಱಕ haṟaku-a₃. 2.** = ಅಱಕ 2. a man of whom anything is rent. see ಕಚ್ಚಿ–, ಸೋಟಿ–.

**ಹಱಕಿ haṟaki.** = ಹಱುಕಿ. a woman of whom anything is rent. see ಕಚ್ಚಿ–, ಸೋಟಿ–.

**ಹಱಕು haṟaku.** = ಪಱಕು, ಪಱುಕು, ಹಱಕ 1 q. v., ಹಱುಕು, ಹಱುಕು, ಹರ್ಕು. (C.). ಹಱಕಿನಲ್ಲಿ ಇಲಿ ಕಡಿಯಿತು (Prv.). ತಮ್ಮಾ, ಹೊದ್ದು ಕೊಳ್ಳುವ ನನ್ನ ಹಱಕ ದೋತರಾ ತನ್ದು ಕೊಡು (B. 3, 25). see Prv. s. ಮುಱಕ. — ಹಱಕುಅಱುವೆ. a torn or tattered cloth. ಹಱಕುಅಱುವೆಯ ತುಣುಕು (ಕರ್ಪಟ G.). — ಹಱಕುಜಾಜೀಮ. a tattered floor-cloth (B. 5, 126). — ಹಱಕುತೊಗಲು. rent leather (Dp. 54). — ಹಱಕು ಪಱಕು. rep. — ಹಱಕು ಪಱಕುಬಟ್ಟೆ. a cloth quite torn or tattered (C). — ಹಱಕುಪುಸ್ತಕ. a torn book (B. 4, 44). — ಹಱಕುಮಾತು. a speech that lacks coherency (ಅಶ್ಲೀಲ, ಶಿಥಿಲಭಾಷಣ G.). — ಹಱಕುಮೊಱ. a worn out dust-fan (My.). — ಹಱಕುವಸ್ತ್ರ. = ಹಱಕುಅಱುವೆ. (C.; B. 5, 76).

**ಹಱತ haṟata.** = ಹಱುತ, ಹರ್ತ. cutting: sharpness (My.). ಹಱತವಾದ ಹದವುಳ್ಳ ಕೊನೆ (ತೀಕ್ಷ್ಣಾಗ್ರ Si. 306).

**ಹಱದು haṟadu.** = ಹಱಿದು. P. p. of ಹಱಿ 1. (B. 1, 23). ಶಿವಾ ಎನ್ದರೆ ಸೆಱಗು ಸುತ್ತಿ ಕೊಣ್ಡ, ಭವಾ ಎನ್ದರೆ ಭೈರವಾಸ ಹಱದು ಬಿಟ್ಟ (Prv.).

**ಹಱಿ haṟi. 1.** = ಪಱಿ 1 q. v. to tear (v. t.), to rend, to break, to slit, etc.; to pluck (Grj. 2, 106 va.; Bh. 3, 13, 21;

B. 3, 8; My.). ವಶಿಷ್ಠನ ಕೊರಳ ನೇಣ ಹಱಿದ ನದಿ (ವಿಪಾಶೆ Nr.). ಇಱಿದರೆಯು ಏಱಿಲ್ಲ, ಹಱಿದರೆಯು ಸೀೞಿಲ್ಲ (fire, Sp.). 2, to cut, as a knife, etc. (C.). ಹಱಿವ ಗರಗಸಿನಲ್ಲಿ ಶಿರವನೊಡ್ಡಲು ಬಹುದು (Dp. 172). 3, to be torn or rent; to be severed, to break (C.). ತಲೆ ಹಱಿದು ಆಡುವ ಆಟ್ಟೆ (ಕಬನ್ಧ Nr.). ಹಱಿಯೋ ಪರಿಯನ್ತರ ಎಟಿಯ ಬಾರದು, ಮುಱಿಯೋ ಪರಿಯನ್ತರ ಬೊಗ್ಗಿಸ ಬಾರದು. — ತೆಪ್ಪ ಹಱಿದರೆ ದೋಣಿ. — ತೆಪ್ಪ ಹಱಿದರೆ ಮುಪ್ಪಿನವನೇ ಸಾಯುವನೋ? (Prvs.). ಹಱಿದ ವಸ್ತ್ರಗಳನ್ನು ನೆಟ್ಟಗೆ ಮಾಡುತ್ತಾಳೆ (B. 5, 294). P. ps. ಹಱಿದು, ಹಱಿದು.

**ಹಱಿ haṟi. 2.** = ಪಱಿ 2, ಹಱಿ 1, etc., in ಹಱಿ ಹಱಿದು (My.).

**ಹಱಿ haṟi. 3.** = ಪಱಿ 3. tearing, etc.; the state of being torn, etc. ಹಱಿಗಲ್ಲು. -ಕಲ್ಲು. a slit or split stone (Rām. 6, 37, 15). — ಹಱಿಗವಿ. -ಕವಿ. a break-poet: a paltry poet (Ch. v. 19; Grj. 1, 30). — ಹಱಿದಲೆಯ. -ತಲೆಯ. (Śmd. 95). a man whose head has been severed from the body, Dakṣa.

**ಹಱಿ haṟi. 4.** = ಹಱಿ 2, etc. flying etc. — ಹಱಿಗಲ್. -ಕಲ್. ಹಱಿಗಲು. = ಹಱಿಗಲ್. (My.). — ಹಱಿಗೋಲ್. -ಕೋಲ್. ಹಱಿಗೋಲು. = ಹಱಿಗಲ್. (J. 12, 14; My.; ಉಡುಪ, ಪ್ಲವ, ಕೋಲ, ತೆಪ್ಪ Si. 84; ಪೋತ 422).

***ಹಱಿ haṟi. 5.** obligation. ನಿಮ್ಮ ಹಂಗೇನು ಹಱಿಯೇನು? Bv. 390.

**ಹಱಿಕಿ haṟiki.** = ಹಱಿಕೆ. see *e. g.* ಕಿವಿ-.

**ಹಱಿಕು haṟiku.** = ಹಱಕ 1, etc. — ಹಱಿಕ ಗಡ್ಡ. a toused, dishevelled beard (Bp. 58, 49).

**ಹಱಿತ haṟita.** = ಹಱತ. sharp. (My.; ಕೋಣ, ಪಾಲಿ, ಅಶ್ರಿ, ಕೋಟಿ, ಅಂಚು, ಆಯುಧಗಳ ಬಾಯಿಧಾರೆ Si. 291). ಹಱಿತವಾಗಿರುವ ಆಯುಧಾದಿಗಳು (ಶೀಕ್ಷ 420).

**ಹಱಿವು haṟivu** = ಪಱಿವು. tearing, etc.; being rent or broken (Bh. 3, 13, 21).

**ಹಱಿವೆ haṟive.** = ಹಱುವೆ, ಹಱುಹೆ, ಹರ್ವೆ. a common potherb, Amarantus oleraceus Willd. (C.). ಪಾಲಿನಲ್ಲಿ ಹಱಿವೆಯಾದರೂ ಹಾಕ ಬಾರದು (Prv.). — ಹಱಿವೆಪಲ್ಯ. = ಹಱಿವೆ. (C.). — ಹಱಿವೆಸೊಪ್ಪು. = ಹಱಿವೆಪಲ್ಯ. (C.). [Tu. ಪದ್ವೆ].

**ಹಱಿಸು haṟisu.** to cause to tear or rend (My.).

**ಹಱು haṟu.** = ಪಱು, etc. floating, etc. — ಹಱುಗಲ್. -ಕಲ್. ಹಱುಗಲು. — ಹಱುಗಲ್ (My.). ಹಱುಗಲಿಕ್ಕುವ ನೀರು (ನಾವ್ಯ); ಹಱುಗಲೇಱುವಾತ (ನಾವಾರೋಹ, ನಾವಿಕ Hlā.). — ಹಱುಗೊಲ್. -ಕೊಲ್. = ಹಱುಗಲ್. (ನೌ, ತರಣಿ, ತರಿ Nr.). ಹಱುಗೊಲನೆ ಜೋಗಯಿಸಿ ಕೊಳುತಲಿ ತೊಱೆಯ ದಾಟ್ಟುವರೂ (Prll. 12, 14). — ಹಱುಗೋಲ್. -ಕೋಲ್. ಹಱುಗೋಲು. = ಹಱುಗೊಲ್. (Bp. 32, 33; My.).

**ಹಱುಕು haṟuku.** = ಹಱಕು, etc. — ಹಱುಕ ಗಡ್ಡ. = ಹಱಿಕ ಗಡ್ಡ. (Bp. 20, 11). — ಹಱುಕು ಕಿವಿ. a slit ear (My.). — ಹಱುಕು ತುಟಿ. a slit lip (My.). — ಹಱುಕು ಬಟ್ಟೆ. a torn or tattered cloth (My.; ನಕ್ತಕ, ಕರ್ಪಟ Si. 223). — ಹಱುಕು ಮೂಗು. a rent nose (My.).

**ಹಱುವೆ haṟuve.** = ಹಱಿವೆ, etc. (My.). see ಮರ-.

**ಹಱುಹೆ haṟuhe.** = ಹಱುವೆ, etc. see ಮರ-.

**ಹಱೆ haṟe.** = ಪಱೆ 1. a drum (Rām. 3, 6, 8; 11, 1, 16). ಹಱೆಯ ಧ್ವನಿ (ತೂರ್ಯರವ, ಆಡಮ್ಬರ Nr.). ಹಱೆಯ ಕುಡುಹು (ದಣ್ಡ Mr. 525). (ಕೃಷ್ಣನ) ರವಮಿಕ್ಕುವ ಹಱೆ ದುನ್ದುಭಿಯೆನಿಕ್ಕು (Mr. 20). [ಸಱೆಯ ಹೊಯಿಸಿ ಕುಱುಹ ಪೂಜಿಸುವರ ಮೆಚ್ಚ, ಕೂಡಲ ಸಂಗಮದೇವಾ Bv. 206].

**ಹರ್- har.** = ಹರ 2, etc. flowing, etc. — ಹರ್ನಾಳಿಗೆ. = ಹರ ನಾಳಿಗೆ. (S. Mhr.).

**ಹರ್ಕು haṟku.** = ಹಱಕು, etc. a rag, etc. ಪುರ್ಕು ಅನ್ದರೆ ಸರ್ಕು ಮುಚ್ಚೀತೇ? (Prv.).

**ಹರ್ಡೆ harḍe.** = ಹರಡೆ, etc. — ಹರ್ಡೆಕಾಯಿಮರ. the ink-nut tree (St. & Pl.).

**ಹರ್ತ haṟta.** = ಹಱತ, etc. sharpness. (My.).

**ಹರ್ತ harta.** Tbh. of ಹರ್ತೃ. see Bp. 54, 4; ವಿತ್ತ-.

**ಹರ್ತವ್ಯ hartavya.** to be taken away or removed, etc. see ಪರಿ-.

**ಹರ್ತೃ hartṛ.** one who brings or conveys; one who takes or receives; one who seizes; a remover; a robber; a destroyer (My.).

**ಹರ್ಮ್ಯ harmya.** *a mansion, a palace*, any large building or residence of a man of wealth (ಸೌಧ, ಉಪ್ಪರಿಗೆ Nn. 94; ಮಾಡ Ct. I, 67).

**ಹರ್ಯಕ್ಷ hari-akṣa.** = ಹರಿಯಕ್ಷ. *a lion.*

**ಹಱ್ಱ್ haṟṟ.** a sound made by monkeys from disgust or anger (Grj. 1, 131 va.; Rsv. 5, 55 va.; 9, 29). *cf.* ಪಱ್ಱ್.

**ಹರ್ವು harvu. 1.** = ಪರ್ವು 1, ಹರವು. to spread (My., especially as v. t.).

**ಹರ್ವು harvu. 2.** = ಹರುವು. a way, a means, etc. (My.).

**ಹರ್ವೆ haṟve.** = ಹಱಿವೆ, etc. a common potherb. ಪರ್ವ ಕಾಲದಲ್ಲಿ ಹರ್ವೆಸೊಪ್ಪು ತಿನ್ದರೂ ಗರ್ವ ಹೋದೀತೇ? (Prv.).

**ಹರ್ಷ harṣa.** = ಪರುಸ 2, ಹರಿಸ, ಹರುಷ, ಹೆರುಸ. bristling, erection (of the hair, etc.). 2, thrilling, thrill, rapture, *delight, glee, joy, pleasure, gladness.* see ಅಗಿ, ಅದುಕುಳಿ.

**ಹರ್ಷಗರ್ಭ harṣa-garbha.** filled with joy (Cpr. 3, 84).

**ಹರ್ಷಣ harṣaṇa.** causing to bristle or stand erect; bristling, becoming erect. 2, causing delight, gladdening, delightful. 3, the fourteenth of the astronomical yōgas. 4, a morbid affection of the eyes. see ರೋಗ-.

**ಹರ್ಷಭಾವ harṣa-bhāva.** the state of being happy. see ಬೀಗು 2.

**ಹರ್ಷಮಾಣ harṣamāṇa.** *rejoicing, joyful, happy.*

**ಹರ್ಷಾಬ್ಧಿ harṣa-abdhi.** an ocean of delight (My.).

**ಹರ್ಷಾಶ್ರು harṣa-aśru.** tears of joy (My.).

**ಹರ್ಷಿತ harṣita.** = ಹರುಷಿತ. bristled, become erect. 2, made glad or happy, gladdened, delighted, happy.

**ಹರ್ಷಿಸು harṣisu.** to rejoice, to exult, to be glad or pleased (My.).

**ಹರ್ಷೋತ್ಸವ harṣa-utsava.** excess of happiness, abundance of joy (My.).

**ಹಲ್ hal.** = ಪಲ್, ಹಲು 1, ಹಲ್ಲು. a tooth (ದಶನ, ದ್ವಿಜ, ದನ್ತ, ರದ, ರದನ Hlā, Mr. 318; ದನ್ತ, ದ್ವಿಜ Nr.; ದ್ವಿಜ, ದನ್ತ Nn. 36; ದನ್ತ, ದಶನ Nn. 81; Bp. 54, 52). ಆಱು ಹಲ್ಲ ಹೋರಿ (ಷೋಡತ್, ಷಡ್ದಶನ Hlā.). ಕಪ್ಪರದಲುಬ್ಬುರು, ಒಪ್ಪರದಿ ನಡೆವರು, ತಪ್ಪಿದರೆ ಹಲ್ಲ ಕಳೆವರು; ಮಹಾತ್ಮರ ಒಪ್ಪವಂ ನೋಡು! (Sp.). — ಹಲ್ಕಡಿ. to grind or gnash the teeth (from anger or fear, My.). — ಹಲ್ಕುರು. a gum-boil (My.).

**ಹಲ್ hal.** a consonant. (My.). 2, the small oblique stroke at the root of a consonant, denoting that it has not the inherent short ಅ, or that it is but a half-letter (Mhr.). — ಹಲನ್ತ. -ಅನ್ತ. ending in a consonant (My.). — ಹಲ್ಸನ್ಧಿ. the junction of consonants (in grammar, My.).

**ಹಲ hala. 1.** = ಪಲ 1, etc., ಹಲು 2. much; many, etc. — ಹಲಬರ್. ಹಲಬರು. = ಪಲಬರ್, etc. many or several persons (Bp. 38, 15; 44, 49; 56, 26; My.). — ಹಲರು. = ಪಲರ್, ಹಲಬರ್. (Bhāgavata 3, 2, 48). — ಹಲವಂಗ. -ಅಂಗ. = ಪಲವಂಗ. various kinds or ways (Bp. 8, 44). — ಹಲವನಾಡು. -ಆಡು. to utter many words (Bp. 56, 19). — ಹಲವರ್. ಹಲವರು. = ಹಲಬರ್, etc. (C.; B. 2, 24). ಹಲವರ ಸಂಗ ಕಲಹಕ್ಕೆ ಕಾರಣ (Prv.). — ಹಲವರ್ಥ. -ಅರ್ಥ. many meanings (Mr. 465 s. ಬೆಡಗು). — ಹಲವಿರುಳು. -ಇರುಳು. many nights (ಗಣರಾತ್ರಿ Mr. 66). — ಹಲವು. = ಪಲವು, ಹಲ. (ಭೂಯಸ್, ಪ್ರಾಯ Nr.; ನಾನಾ Nn. 162; Bp. 19, 42; ಅನೇಕ G.; C.). ಹಲವಾನೆ (ಘಟೆ Hlā.). ಹಲವನೀಡ ಆಕಳ್ (ಪರೇಷ್ಟುಕೆ Nr.). — ಹಲವು ಕಾಲ. a long time (Bp. 57, 15). ಹಲವು ಕಾಲದ ಹಗೆ ತನ ಮಾಡಿ ಮಱುಗುಹ (ಅನುಶಯ Nr.). ಹಲವು ಕಾಲಕೆ ಹರಸಿ ಹೆತ್ತರು (Prll. 3, 12). — ಹಲವು ಕೆಲವು. some, several (ಕೆಲ ಕೆಲವು Śmd. 47. 53 Cm.; ಕತಿಪಯ Ct. I, 91). — ಹಲವು ಚಿತ್ತಾರ. many pictures. ಹಲವು ಚಿತ್ತಾರ ಮಸಿ ನುಂಗಿತು (Prv.). — ಹಲವು ದೇವರು. many gods. ಹಲವು ದೇವರನು ನಮ್ಬಿ, ಹಾರುವ ಕೆಟ್ಟ; ಹಾರುವನನ್ನು ನಮ್ಬಿ, ಹಲವರು ಕೆಟ್ಟರು (Prv.). — ಹಲವು ಧಾನ್ಯ. many kinds of corn or rice; much corn or rice (ಬಹುಧಾನ್ಯ Nn. 132). ಹಲವು ಧಾನ್ಯಂಗಳ್ ಅಱುವತ್ತು ದಿವಸಕ್ಕೆ ಬೆಳವವು (ಕೆಯ್ಗಳ್) ಷಷ್ಟಿಕ್ಯಮ್ ಎನಿಕ್ಕು (Mr. 94). — ಹಲವು ಪದ. many feet or syllables, etc. ಸಮಾಸ ಹಿರಿದಾದ ಹಲವು ಪದಂಗಳು (ದಣ್ಡಕ Hlā.). — ಹಲವು ಪದಾರ್ಥ. many or several things, etc. ಹಲವು ಪದಾರ್ಥಂಗಳ್ ಒಬ್ಬುಳಿಗೂಡಿ ಕ್ರಿಯೆಯು ನುಡಿಸ ಎಮ್ಬುದಱಲ್ಲಿ ಚಶಬ್ದಮೆನಿಸುಗು (Nr.). — ಹಲವು ಪ್ರಕಾರ. various manners or kinds. ಹಲವು ಪ್ರಕಾರಮಾದುದು (ಉಚ್ಚಾವಚ, ನೈಕಭೇದ Nr.). — ಹಲವು ಬಗೆ. = ಹಲವು ಪ್ರಕಾರ. ಹಲವು ಬಗೆ ಆದುದು (ಉಚ್ಚಾವಚ, etc. Si. 376). — ಹಲವು ಭಂಗ. much discomfiture or trouble. ಹಾರುವಯ್ಯನ ಸಂಗ ಹಲವು ಭಂಗ (Prv.). — ಹಲವು ಮಕ್ಕಳು. many children. ಹಲವು ಮಕ್ಕಳ ತನ್ದೆ (Sp.). ಹಲವು ಮಕ್ಕಳ ಬಳ್ಳಿ, the shrub Asparagus sarmentosus Lin. (St. & Pl.). — ಹಲವು ಮಾತು. many words (Bp. 38, 24; 42, 37; J. 5, 62; 32, 17; Bh. 2, 13, 45). — ಹಲವು ಯೋಜನ. many yōjanas (Bh. 1, 8, 93). — ಹಲವು ಲೋಕ. many worlds (J. 2, 59). — ಹಲವು ವರ್ಣ. various colours; a variegated colour (ಶಬಲ Mr. 444). — ಹಲವು ಸಮಗಾಱರು. many shoemakers. ಹಲವು ಸಮಗಾಱರು ತೊಗಲು ಹದ ಗೆಡಿಸಿದರು (Prv.). — ಹಲವುಸುರ್. -ಉಸುರ್. to utter many words (Bp. 27, 6; 40, 50; 45, 48). — ಹಲವು ಸೂಲ್. many pregnancies. ಹಲವು ಸೂಲಾವು (ಪರೇಷ್ಟುಕೆ, etc. Hlā.). ಹಲವು ಸೂಲಾಕಳು (ಪರೇಷ್ಟುಕೆ Mr. 181). — ಹಲವು ಸೂಟ್. many times (Bp. 35, 11). — ಹಲವು ಹರಿವಿ. many vessels (Bh. 1, 10, 25). — ಹಲವು ಹಳ್ಳ. many brooks. ಹಲವು ಹಳ್ಳ ಕೂಡಿ ಒನ್ದು ಹೊೞೆ ಆಯಿತು (Prv.).

**ಹಲ hala. 2.** (= ಪಲ 2). a sound of imitation. — ಹಲ ಹಲ. rep. a sound to imitate idle clamour (My.).

**ಹಲ hala. 1.** = ಪಲ. a certain weight (My.). ಹತ್ತು ಹಲ ತಾಮ್ರದೊಳು ನೀಲಂ (Mr. 60). ಹಲತೂಕ ಬೆಳ್ಳಿ (ಶತಮಾನ Si. 495). ತೊಲೆಯಿನ್ದ ಹಲವಾಗುತ್ತದೆ, ಹೊಲೆಯಿನ್ದ ಭ್ರಷ್ಟವಾಗುತ್ತದೆ (Prv.).

**ಹಲ hala. 2.** *a plough.* ನಿಲವಿಲ್ಲದೆ ಹಲದಿನ್ದ ಹೊಲದ ಉಕ್ಕೆ; ನಿಲ ನೋಡಿ, ಸಂಸಾರ. — ನೆಲಕ್ಕೆ ಹಲ, ರಾಜ್ಯಕ್ಕೆ ಬಲ (Prvs.) 2, ugliness, deformity (ವೈರೂಪ್ಯ).

**ಹಲಕು halaku. 1.** to climb a tree (ವೃಕ್ಷಾರೋಹಣ Śmd. Dh., o. r. ವೃಕ್ಷಾರೋಹ).

**ಹಲಕು halaku. 2.** to certain member of the body (ಶರೀರಾಂಗಭೇದ Śmd. Dh.); the lower part of the cheek (ಕಪಾಲದ ಕೆಳಗಿರುವ ಸ್ಥಾನ S. Mhr.; T. ಅಲಗು, the jaw-bones). see Rām. 6, 30, 30.

**ಹಲಕು halaku. 3.** = ಹಲಿಕೆ, q. v. a kind of harrow. (S. Mhr.).

**ಹಲಗತ್ತಿ halagatti.** a shrubby creeper (the seeds of which are clothed with a silky wool) of the family Asclepiadeae, perhaps Toxocarpus Kleinii Wight. and Arn. (Z.).

**ಹಲಗೆ halage.** = ಪಱಿಗೆ, etc. Tbh. of ಫಲಕ (Śmd. 25. 191. 338; ಫಲಂಕ Nn. 134). a plank, etc. (My.). ನಸೆ ಇದ್ದ ಹಲಗೆ ಸಿಕ್ಕಿದರೆ ಹಸೆ ಯಾಕೆ? (Prv.); [shield. ಸಮಚಿತ್ತವೆಮ್ಬ ನೇಮದ ಹಲಗೆಯ ಹಿಡಿದು ಶಿವಚಿತ್ತವೆಮ್ಬ ಕೂರಲಗ ಕೊಣ್ಡು Bv. 725]. see Bp. 33, 13; 39, 62; 43, 3; Bh. 2, 13, 46; B. 5, 135. 2, a kind of tabor (S. Mhr.; Mhr. ಹಲಕೀ). — ಹಲಗೆಮಣಿದೊಟ್ಟಿಲ್. -ತೊಟ್ಟಿಲ್. a cradle with jewel-boards (Prll. 3, 27). — ಹಲಗೆಸೇರುವೆ. a ceiling of boards (My.).

**ಹಲಗೆಕಾಱ halage-kāṟa.** a man who carries a shield (Bp. 16, 13).

**ಹಲಚಿ halaci.** the state of being like a board: flatness (B. 3, 24. 108; 5, 21. 174. 258). — ಹಲಚಿಮೂಗಿನವ. a flat-nosed man (ಅವಟೀಟ G.).

**ಹಲದಣ್ಡ hala-daṇḍa.** the pole or shaft of a plough (ನೇಗಿಲ ಈಸು Nn. 7).

**ಹಲದಿ haladi.** = ಪಳದಿ, etc. turmeric (Sk. ಹಲದ್ದೀ). — ಹಲದಿ ಅಡವಿಬೆಣ್ಡೆ. a small tree, Erinocarpus nimmoanus Grah. (Z.).

**ಹಲಧರ hala-dhara.** Balarāma (J. 7, 2. 20).

**ಹಲಪಿ halapi.** a round potsherd used in the ಹಲಪಿಯಾಟ (S. Mhr.).

**ಹಲಮುಖಿ hala-mukhi.** N. of a vṛitta (Ch.).

**ಹಲಸನ್ದಿ halasandi.** = ಅಲಸನ್ದಿ, etc. a kind of pulse. (My.). [Tu. ಅಲತ್ತಣ್ಡೆ].

**ಹಲಸನ್ದೆ halasande.** = ಹಲಸನ್ದಿ, etc. (My.).

**ಹಲಸಿಗ halasiga.** (fr. ಪಲಾಶ). a man who deals in medicinal leaves, a doctor (Śāstrasāra in W. v. 1647).

**ಹಲಸು halasu.** = ಹಳಸು. Tbh. of ಪನಸ. the jack tree (C.; Bp. 19, 66; ಪನಸ Mr. 119) and its fruits. ಹಲಸು ತಿನ್ದರೆ ಹೊಲಸು ಹೋದೀತೇ? (Prv.). ಆನ ಕಾಲದಲಾದಡೆಯು ಫಲಮಿಾವುತಿಹ ಹಲಸುಗಳು (Prll. 3, 3). — ಹಲಸಿನ ಮರ. the jack tree (C.). — ಹಲಸಿನ ಹಣ್ಣು. a ripe jack fruit (C.; B. 5, 142). ನಿನ್ನ ಸಾಲಕ್ಕೆ ನನ್ನ ಹಲಸಿನ ಹಣ್ಣು (Prv.).

**ಹಲಹು halahu.** to blame (?) or to destroy (Rām. 6, 51, 10).

**ಹಲಾ halā.** *a vocative particle used in addressing a female friend* (in theatrical language).

**ಹಲಾಕು halāku.** oppressed, overcome, spent through sickness, labour, etc., ruined, destroyed, lost (My.; Te.; T. ಅಲಾಕ್ಕು; Mhr., H. ಹಲಾಕ).

**ಹಲಾನ್ವಿತವೃಷಭಯುಗ್ಮ hala-anvita-vriṣabha-yugma.** a pair of oxen yoked to the plough. see ಅರ್ 4.

**ಹಲಾಯಿಸು halāyisu.** to shake (v. t., My.; H.).

**ಹಲಾಯುಧ hala-āyudha.** plough-weaponed: *Baladēva, Balarāma* (ರಾಮ, ಬಲದೇವ Nn. 24). 2, Rāmacandra (Abh. P. 12, 11). 3, N. of the author of the abhidhānaratnamāla. ಹಲಾಯುಧನ ವಿಸ್ತರದ ವಚನೋಕ್ತಿ (Mr. 4). 4, N. of a śivabhakta (Bp. 25 sum.; 25, 1; 37, 44). 5, = ಹಲಮುಖಿ (Ch.).

**ಹಲಾಲ್ಖೋರ halāl-khōra.** a sweeper (C.; Mhr., H.).

**ಹಲಾಹಲ halāhala.** = ಹಾಲಹಲ. *a sort of deadly poison.*

**ಹಲಿ hali. 1.** = ಹಲೆ 1. (fr. ಫಲಿ). the fruit or embryo. — ಹಲಿ ಪುಟು. -ಉಟು. the embryo to leave, miscarriage to happen (S. Mhr.). ಹಲಿವುಟುಯೋಣ (ಗರ್ಭಪಾತ, ಗರ್ಭಸ್ರಾವ); ಹಲಿವುಟುದವಳು (ಸ್ರವದ್ಗರ್ಭ G.).

**ಹಲಿ hali. 2.** a ploughman, an agriculturist. 2, *Baladēva.* 3, a large plough; a ploughshare. 4, a furrow. 5, agriculture. 6, the poisonous plant Methonica superba.

**ಹಲಿಕೆ halike.** = ಹರಿಕೆ 2, ಹಲಕು 3, ಹಲಿವೆ, q. v. a kind of harrow (ಕೋಟಿಶ Mr. 370).

**ಹಲಿಗೆ halige.** = ಹಲಗೆ, etc. a plank, etc. (C.; Bh. 1, 10, 27; B. 4, 71. 121; Si. 276. 281. 290. 349. 461). 2, a kind of tabor (S. Mhr.; see s. ಪಂಚಮಹಾವಾದ್ಯ). — ಹಲಿಗೆಬೆಲ್ಲ. a small flat cake of jaggory cut off from a large one (My.).

**ಹಲಿಪ್ರಿಯ hali-priya.** *the tree Nauclea cadamba* Roxb.

**ಹಲಿಪ್ರಿಯೆ hali-priye.** *spirituous liquor.*

**ಹಲಿರಾಮ hali-rāma.** Baladēva (Mr. 19).

**ಹಲಿವೆ halive.** = ಹಲಕು 3, ಹಲಿಕೆ, ಹಲುಬೆ, ಹಲುವೆ. a thick lengthy piece of wood with teeth or a kind of harrow that is drawn over ploughed land to level it and to cover seed when sown (My.; Tu. ಪಲಾಯಿ, Te. ಪಲುಗೊಱು. the meaning attached to the S. Mhr. ಹಲಕು is as follows: ಕೆಸಱು ಮುಸ್ತಾದ್ದು ತೆಗೆಯುವದಕ್ಕೆ ಹೊಟ್ಟು ಎಟಿಯುವ ಗೋಲೇ ಪ್ರಕಾರ ಇರುವ ಒಸ್ಸು ಕಟ್ಟಿಗೆಯ ಸಾಮಾನು).

**ಹಲು halu. 1.** = ಹಲ್, etc. a tooth (Bh. 1, 8, 94). — ಹಲು ಗಿರಿ. -ಕಿರಿ. = ಪಲ್ಗಿರಿ. to grin (Bp. 49, 21). — ಹಲುಗಿರಿಸು. -ಕಿರಿಸು. to cause to grin (J. 25, 39). — ಹಲುದಿನ್. -ತಿನ್. to gnash the teeth (Rām. 6, 39, 7). — ಹಲುದೆಗೆ. -ತೆಗೆ. to grin (Rām. 3, 4, 30). — ಹಲುಮಾಣಿಕ. = ಹಣುಮಣಿಕ್ಯ. a thorny shrub or tree, Flacourtia sepiaria Roxb. (or Flacourtia sapida, ಸ್ವಾದುಕಣ್ಟಕ, ವಿಕಂಕತ, ಸ್ರುವಾವೃಕ್ಷ, ಗ್ರನ್ಥಿಲ, ವ್ಯಾಘ್ರಪಾದ್ Nr.; ಘಳಘೋಣ್ಟೆ Mr. 115, sic!). — ಹಲುಮಾಣಿಕನುರ. (ಸ್ವಾದುಕಣ್ಟಕ, etc., ನಾಯಿಬೇಲ, ಹುಳೀ ಬೇಲ Si. 130). — ಹಲು ಮೊರೆ. = ಪಲ್ಮೊರೆ. to gnash or grind the teeth (Bh. 1, 10, 31). — ಹಲು ಹಲು ಹಳಚು. to strike the teeth together (Bh. 3, 10, 25).

**ಹಲು halu. 2.** = ಹಲ 1, etc. much, many, etc. — ಹಲು ಮಕ್ಕಳ ತಾಯಿ ಬಳ್ಳಿ. a scandent thorny shrub, Asparagus racemosus Willd. (St. & Pl.). — ಹಲುವು. = ಹಲವು. (ಬಹು Nr.).

**ಹಲುಬು halubu.** = ಪಲುಮ್ಬು. to lament (Bp. 15, 21; Bh. 8, 27 sum.; J. 13, 56. 58; 19, 36; 20, 19. 20; 24, 1; 26, 34; 31, 61. 62).

**ಹಲುಬೆ halube.** = ಹಲಿವೆ, etc. (My.).

**ಹಲುವೆ haluve.** = ಹಲಿವೆ, etc. (My.).

**ಹಲೆ hale. 1.** = ಹಲಿ 1. ಅಕಸ್ಮಾತ್ ಹಲೆವುಟುದವಳು (ಅವತೋಕೆ G.).

**ಹಲೆ hale. 2.** ಹಲಾ. water; spirituous liquor; the earth.

**ಹಲ್ಕಾ halkā.** light; unimportant, insignificant; of little or low estimation or influence (My.; Br.; Mhr., H. ಹಲಕಾ).

**ಹಲ್ದೆ halde.** = ಅರಳೆ, ಅಲ್ದೆ, ಹರಡೆ, ಹಡೆ (My.; H.).

**ಹಲ್ಯ halya.** to be ploughed or tilled, arable; *a ploughed field,* arable land. 2, ugliness; deformity.

**ಹಲ್ಯೆ halye.** *a multitude of ploughs.*

**ಹಲ್ಲಕ hallaka.** *a red water-lily, Nymphaea rubra.* see Nr. s. ಹುಟ್ಟು 1.

**ಹಲ್ಲಣ hallaṇa.** = ಪಲ್ಲಣ. (Śmd. 25). Tbh. of ಪಲ್ಯಯನ (Śmd. 351. 375; Nr.; Hlā.; ಪಲ್ಲಣ, ನೀವಿ Nn. 105; Bp. 58, 33; J. 8, 33).

**ಹಲ್ಲಣಿಸು hallaṇisu. 1.** = ಪಲ್ಲಣಿಸು. ಆನೆಯ ಹಲ್ಲಣಿಸುವುದು (ಕಲ್ಪನೆ, ಸಜ್ಜನೆ Nr.).

**ಹಲ್ಲಣಿಸು hallaṇisu. 2.** to go on or advance without stopping (Bh. 3, 18, 32. 35; Mhr. ಹಾಲಣೇಂ, to move, to stir; to be agitated). ಹಲ್ಲಣಿಸಿತೆನಲ್ಕೆ ನಿಲ್ಲದಯ್ದುದುದಕ್ಕುಂ (Bhn. 14).

**ಹಲ್ಲರು hallaru.** = ಹಲವರು s. ಹಲ 1. many. ಗೆದ್ದರೆ ಹಲ್ಲರು ಗೆದ್ದರು, ಸೋತರೆ ಕೊಂಕಣಿಗರ ಗಣ್ಡು ಸೋತ (Prv.).

**ಹಲ್ಲಾ hallā.** an attack, onset (My.; Mhr., H.); escalade, scaling a fort (My.). — ಹಲ್ಲಾ ಏಱು. = ಹಲ್ಲಾ ಹತ್ತು (My.). — ಹಲ್ಲಾ ಹತ್ತು. to scale, as a fort (My.).

**ಹಲ್ಲಿ halli. 1.** = ಪಲ್ಲಿ. the small house-lizard, Lacerta gecko, Gecko swinhonis, Gecko subpalmatus (Bd.; ಮುಸಲಿ, ಗೃಹಗೋಧಿಕೆ, Nr.; ಮುಶಲಿ, ಗೃಹಗೋಧಿಕೆ, etc. Mr. 166; ಮುಸಲಿ, etc., ಗವುಳಿ Si. 171; C.). ಹಲ್ಲಿ ಓಡೋದೇನು? ಬೆವರು ಸೋರೋದೇನು? — ಹಲ್ಲಿಸಕುನ. the omen occasioned by a lizard (My.).

**ಹಲ್ಲಿ halli. 2.** = ಹಲ್ಲೆ 1 No. 1, etc. the lobe of the ear. (S. Mhr.).

**ಹಲ್ಲಿ halli. 3.** that has teeth ( or is it connected with ಹಲ್ಲೆ 1? or with ಹಲಿಕೆ?). see ಗೋರಿ-.

**ಹಲ್ಲು hallu.** = ಹಲ್, etc. a tooth (ದ್ವಿಜ Si. 413; C.), also of a saw (B. 4, 131; C.); a step of a ladder (B. 4, 150; C.); a spoke of wheel (S. Mhr.). ಹಲ್ಲಿನ (B. 4, 131). (ಕುದುರೆಯ) ಹಲ್ಲು ಕಪ್ಪಾಗಿರಲು ಹೊಲ್ಲ, ಬಿಳಿದಾಗಿರ್ಪ ಹಲ್ಲಾಗೆ ಪೂಜ್ಯಮದು, ಕೆಳಗಾಱು ಮೇಲಾಱು ಹಲ್ಲಿರಲು ಜಯಮಕ್ಕು, ಹೆಚ್ಚು ಕುನ್ದಾಗೆ ದನ್ತಾಧಿಕಂ ದನ್ತಹೀನಂ (Mr. 277). ಹಲ್ಲು ಇರುವಾಗಲೇ ಕಡ್ಲೆ ತಿನ್ನಬೇಕು. — ಹಲ್ಲು ಕಚ್ಚಿಕೊಣ್ಡು, ಅವಲಕ್ಷಣ ಅನ್ನಿಸಿಕೊಣ್ಡ. — ಹಲ್ಲುಗಳ ನಡುವೆ ನಾಲಿಗೆ ಸಿಕ್ಕಿರುವ ಹಾಗೆ. — ಹಲ್ಲು ಹೋದ ಮೇಲೆ ಕಲ್ಲು ಜಗಿದೇನು ಅನ್ದ ಹಾಗೆ. — ಹಲ್ಲಿಗೆ ಹಱುಯದ ಮೂಳೆ ಹತ್ತು ರುಪ್ಪಿಯ ಮುಸಾಲೆ ಕೆಡಿಸಿತು. — ಬೆಣ್ಣೆ ತಿನ್ದು, ಹಲ್ಲು ಬಿದ್ದುಹೋಯಿತನ್ತೆ. — ನಿಲಕಡೆ ಇಲ್ಲದವನಲ್ಲಿ ಊಟಕ್ಕೆ ಹೋಗಿ, ಇದ್ದ ಹಲ್ಲು ಉದುರಿಸಿಕೊಣ್ಡ. — ನುಂಗಬಾರದ ತುತ್ತು ತುಟಿ ಮೀಱುದ ಹಲ್ಲು ಸನು. — ಧರ್ಮಕ್ಕೆ ಕೊಟ್ಟ ಎಮ್ಮೆಯ ಹಲ್ಲು ಹಿಡಿದು ನೋಡಿದ (Prvs.). see ಪೊಳ್ಳು-. — ಹಲ್ಲ ಕಡ್ಡಿ. = ಹಲ್ಲುಕಡ್ಡಿ. ಹತ್ತಱ ಹಲ್ಲ ಕಡ್ಡಿ ಒಬ್ಬನ ತಲೇ ಹೊಱೆ (Prv.). — ಹಲ್ಲ ಪುಡಿ. = ಹಲ್ಲು ಪುಡಿ. (G. 100). — ಹಲ್ಲು ಕಡಿ. to gnash the teeth (G. 322). — ಹಲ್ಲುಕಡ್ಡಿ. a tooth-pick (My.). — ಹಲ್ಲು ಕಿಸಿ. to grin (B. 2, 12). — ಹಲ್ಲುಗಿರಿ. -ಕಿರಿ. to grin (Abhā. 2, 71). — ಹಲ್ಲು ಗಿರಿಕು. -ಕಿರಿಕು. grinning (Rām. 6, 37, 15). — ಹಲ್ಲು ತಿನ್ನು. to

**ಹಿಣಿ hiṇi.** = ಇಣಿ, ಪಿಣಿಲ್ 2, ಹಿಣಿಲ್ 1, ಹಿಳಲು, ಹಿಳಿಲ್. a bull's or bullock's hump (ಅಂಸಕೂಟ, ಕಕುದ್ Hlā.; M. ಪೂಇಞ್ಞಿ; T. ಪಿಜಲ್).

**ಹಿಣಿಕು hiṇiku.** = ಇಣಿಕು, ಹಣಿಕು, etc. to look slyly. — ಹಿಣಕಿ ನೋಡು. = ಹಣಿಕಿ ನೋಡು. (My.).

**ಹಿಣಿಲ್ hiṇil. 1. ಹಿಣಿಲು.** = ಹಿಣಿ, etc. (ಕಕುದ, ಕಕುದ್ Nr.; ಕಕುದ Mr. 179). ಗೂಳಿಯ ಹಿಣಿಲು (ವೃಷಾಂಗ, ಕಕುದ್ Nr.). ಗೂಳಿಯ ಬೆನ್ನ ಹಿಣಿಲು (ಕಕುದ Nn. 143, o. r. ಹಿಳಿಲು).

**ಹಿಣಿಲ್ hiṇil. 2. ಹಿಣಿಲು.** = ಪಿಣಿಲ್ 1, ಹೆಣಿಲು, ಹೆರಲು, ಹೆರಳ್, ಹೆಳಲು. the string of a bow (Bh. 8, 22, 27); a braid of hair (ಕಚಬನ್ಧ Ct. I, 74; ಪಾಶ Mr. 320; Rām. 1, 16, 52); a peacock's tail (J. 13, 51). ಗಣ್ಡುಡಿಗೆಯುಟ್ಟು, ಬಿಟ್ಟು ಹಿಣಿಲಂ (Śmd. 282, o. r. ಕಣ್ಡುಡಿಗೆ-). see ಬೆಳೆವಿಣಿಲು.

**ಹಿಣ್ಟೆ hiṇṭe.** = ಪೆಟ್ಟೆ, etc, a lump, a clod (My.).

**ಹಿಣ್ಡಿ hiṇḍi.** the oil-seed from which the juice has been expressed, the refuse of oil-seed, an oil-cake (ಪಿಣ್ಯಾಕ Nr.; ತೈಲಕ Mr. 378; C.; Bp. 24, 68; B. 2, 19). 2, a kind of chutney made of the emblic myrobalan (ನೆಲ್ಲಿ My.).

**ಹಿಣ್ಡಿಲ hiṇḍila.** a coiled serpent (ಜಿಹ್ಮಗ, ಕುಣ್ಡಲಿ, ಮುರಿದ ಫಣಿ Mr. 400, o. r. in two MSS. ಹಿಣ್ಡಲ).

**ಹಿಣ್ಡೀರ hiṇḍīra.** *cuttle-fish bone, Os sepiae.*

**ಹಿಣ್ಡು hiṇḍu.** = ಪಿಣ್ಡು. to press with the fist or between the palms of the hands, etc. in order to extract the juice, oil, etc., to squeeze out (ಮುಷ್ಟಿನಿಷ್ಪೀಡನ Śmd. Dh.; ನಿಷ್ಪೀಡನ Śm. 96; C.; Bp. 11, 11; My.); to wring, as a wet cloth (My.); to squeeze through (cloth, etc., My.); to squeeze or pinch, as the ears (My.); to extract, as milk, to milk (B. 1, 21; 4, 220; 5, 285); to give milk, as buffaloes, etc. (B. 1, 15. 18); to squeeze, to oppress with hardships, to harass (Bh. 1, 10, 31. 35; J. 31, 26). ದೊಣ್ಣೀ ಹಿಣ್ಡಿದರೆ ಎಣ್ಣೆ ಬೀಳುವದೇ? — ಮೊಸರು ಹುಳಿಯೆನ್ನ, ಹಸುರುಹುಲ್ಲ ಹಿಣ್ಡಿದನನ್ತೆ (Prvs.).

**ಹಿಣ್ಡು hiṇḍu.** = ಪಿಣ್ಡು, q. v. a collection, a multitude, etc. (ಗೋಸಮೂಹ Śmd. Dh.; ತುಱುಮನ್ದೆ Śm. 96; ಕಲಾಪ, ಸಂಹತಿ Si. 439; Grj. 2, 106 va.; 6, 56 va.; Bp. 51, 54; Bh. 3, 13, 18; C.; B. 4, 37). ತುಱುವಿನ ಹಿಣ್ಡು (ಗೋವೃನ್ದ, ಗೋಧನ, ಧನ Hlā.). ಪಾರಸತಿಯುರ ಹಿಣ್ಡು (ಗಾಣಿಕ್ಯ Mr. 305). ಪಶುಗಳ ಹಿಣ್ಡು (ಸಮಜ Si. 318); ಗಿಣಿಗಳ ಹಿಣ್ಡು (ಶೌಕ 181); ಆನೆಗಳ ಹಿಣ್ಡು (ಹಸ್ತಿಕ 269); ಆಕಳ ಹಿಣ್ಡು (ಗೋಕುಲ, ಗೋಧನ 318); ಎತ್ತುಗಳ ಹಿಣ್ಡು (ಔಕ್ಷಕ 318); ಎಳೆಕಱುಗಳ ಹಿಣ್ಡು (ವಾತ್ಸಕ 318). see Prvs. s. ಹಣ್ಡೆ. — ಹಿಣ್ಡುಕಳ್. -ಆಕಳ್. a herd of cows (J. 9, 19). — ಹಿಣ್ಡಿಗೆ ಬಿಗಿ. to fasten together into one mass (Bhaktisāra 85). — ಹಿಣ್ಡುಕೌಪ. a number of small pieces of cloth. ದಣ್ಡಕೋಲಿನ ತುದಿಗೆ ಹಿಣ್ಡುಕೌಪದ ಕಟ್ಟಿ, ಮುಣ್ಡೆಯರ ಕಣ್ಡು ಭ್ರಮಿಸುವ ಯೋಗಿಗೆ ಮಣ್ಡೆ ಬೋಳೇಕೆ? (Sp.). — ಹಿಣ್ಡುಗಂಕಣ. -ಕಂಕಣ. = ಪಿಣ್ಡುಗಂಕಣ, q. v. (Śmd. 386; Kk. 98). — ಹಿಣ್ಡುಗಟ್ಟು. -ಕಟ್ಟು. to form a herd, to come together in crowds, etc. (B. 2, 2. 18; 3, 56. 67). — ಹಿಣ್ಡುಗಣೆ. -ಕಣೆ. a heap or number of arrows (J. 22, 20). — ಹಿಣ್ಡುಗೂಡು. -ಕೂಡು. to come together in crowds, to assemble in numbers, etc. (C.; B. 5, 105). — ಹಿಣ್ಡುವಲೆ. -ಬಲೆ. a variety of net (Bh. 3, 13, 23). — ಹಿಣ್ಡು ಹಿಣ್ಡು. rep. (Bp. 28, 21). — ಹಿಣ್ಡುಹೊಳಹು. the shine of a large number (Bh. 3, 13, 18). — ಹಿಣ್ಡೇಱು. -ಏಱು. to rise in numbers (Grj. 4, 45). — ಹಿಣ್ಡೊಡೆ. -ಒಡೆ. to separate from or leave the herd. ಹಿಣ್ಡೊಡೆದ ಆಕಳು ಕಣ್ಡ ಕಡೆ (Prv.).

**ಹಿಣ್ಡುಳೆ hiṇḍuḷe.** N. of a plant (ಸೌರಾಷ್ಟ್ರಿ Mr. 147, one MS. ಹಿಣ್ಡುಳಿಕೆ).

**ಹಿಣ್ಡೆ hiṇḍe.** Tbh. of ಪಿಣ್ಡ. a ball of rice offered to the manes, etc. — ಹಿಣ್ಡೆಕೂಟ. a meal at the sapiṇḍīkaraṇa (My.). ಹಿಣ್ಡೆಕೂಟ ಮುಣ್ಡೆಗೆ ಆದೀತೇ? (Prv.).

**ಹಿಣ್ಡ್ಲಿ hiṇḍli.** (= ಹಿಣ್ಡುಳೆ?). — ಹಿಣ್ಡ್ಲಿ ಕಾಯಿ. the fruit of a creeper of the cucumber tribe, perhaps Cucumis trigonus Roxb. (Z.).

**ಹಿತ hita.** put, placed, laid, imposed; held, taken, seized. 2, *suitable, proper, fit,* worthy; advantageous, beneficial, profitable, useful, good; salutary, wholesome, agreeing with. 3, friendly, affectionate, kind. 4, a friend, a benefactor. 5, advantage, profit, benefit, service, good, welfare (ಪ್ರಯೋಜನ Nn. 84). ಹಿತವಂ (ತಕ್ಕಂ Kk. 38). ಪರಹಿತ ಮಾಡಿ, ತನ್ನ ಹಿತ ತಪ್ಪಿಸಿಕೊಣ್ಡ. — ಮದುವೇ ಮನೇಲಿ ಅನ್ನವಿಕ್ಕಿ, ಹಿತವ ಪಡದ ಹಾಗೆ (Prvs.). see Śmd. 158. 365; Bp. 38, 7; 40, 90; B. 4, 17; 5, 206.

**ಹಿತಕರ hita-kara.** doing what is fit or proper, doing a service, performing a kindness, friendly, favourable, beneficial; a benefactor. (Ch. v. 222; Bp. 40, 80).

**ಹಿತಕಾರಕ hita-kāraka.** doing what is good, beneficial, salubrious, etc. (C.; B. 3, 37).

**ಹಿತಕಾರಿ hita-kāri.** doing services, performing kindnesses or benefits, befriending, useful, beneficial, auspicious. (Rām. 6, 44, 31; Bp. 16, 25; My.). ನಾರಿ ಪರ ಉಪಕಾರಿ, ನಾರಿ ಸ್ವರ್ಗಕೆ ದಾರಿ, ನಾರಿ ಸಕಲರಿಗೆ ಹಿತಕಾರಿ; ಮುನಿದರೇ ನಾರಿಯೇ ಮಾರಿ (Sp.).

**ಹಿತಬಾರಿ hitabāri.** = ಹಿತವಾರಿ, trustworthy. (My.).

**ಹಿತರಸಸ್ವೀಕಾರ hita-rasa-svīkāra.** the making one's own of pleasant fluids. see ಹಿೞಲ್ 1.

**ಹಿತವತ್ hita-vat.** friendly, favourable, doing good, useful.

**ಹಿತವನ್ತ hita-vanta.** Tbh. of ಹಿತವತ್. one who confers benefits, a benefactor, a friend (C.; B. 5, 179). ತಾಯಿಗಿನ್ತ ಹಿತವನ್ತರಿಲ್ಲ, ಸಕ್ಕರೆಗಿನ್ತ ಸವಿಯಿಲ್ಲ (Prv.); feminine ಹಿತವನ್ತೆ (My.).

**ಹಿತಶತ್ರು hita-śatru.** hostile to the weal or advantage of (Mhr.); a secret enemy (My.).

**ಹಿತಶತ್ರುತ್ವ hita-śatrutva.** secret enmity (My.).

**ಹಿತಾವಹ hita-āvaha.** bringing benefit, etc., salutary, salubrious (B. 4, 31).

**ಹಿತಾಶಂಸೆ hita-āśaṁse.** *benediction.*

**ಹಿತೈಷಿ hita-ēṣi.** wishing well, desiring another's welfare, kindly disposed, benevolent. (My.).

**ಹಿತೋಪದೇಶ hita-upadēśa.** friendly advice, good counsel, salutary instruction. 2, N. of a popular collection of stories and fables. (C.; B. 4, 196).

**ಹಿತ್ತಲ್ hittal. ಹಿತ್ತಲು.** = ಪಿತ್ತಲ್, ಪಿನ್ತಿಲ್, etc., ಹಿತ್ತಲ, ಹಿತ್ತಿಲ್. a back-yard (C.; Bp. 31, 5; B. 1, 9; 4, 25; Si. 118). ಹಿತ್ತಲಗಿಡ ಮದ್ದಲ್ಲ, ಮಕ್ಕಳ ಮಾತು ನಿಜವಲ್ಲ. — ಒಲಪುಗಾತಿಗೆ ಮನೆಯೆಲ್ಲಾ ಹಿತ್ತಲು. — ಧರ್ಮಕ್ಕೆ ದಟ್ಟಿ ಕೊಟ್ಟರೆ ಹಿತ್ತಲಿಗೆ ಹೋಗಿ, ನೋಟ ಹಾಕಿ ನೋಡಿದ (Prvs.). — ಹಿತ್ತಲ ಬಾಗಿಲ್. a back-yard gate (Bp. 61, 20). — ಹಿತ್ತಲ ಮನೆ. a building in the back-yard (Bp. 42, 31).

**ಹಿತ್ತಲ hittala.** = ಹಿತ್ತಲ್, etc. (ನಿಷ್ಕುಟ, ಪಿತ್ತಿಲ್ Nn. 142; ನಿಷ್ಕುಟ Mr. 480; B. 5, 135. 203).

ಹಿತ್ತಳಿ hittaḷi. = ಹಿತ್ತಳೆ, etc. (Si. 332).

ಹಿತ್ತಳೆ hittaḷe. = ಹಿತ್ತಲ 1, etc. brass (ಆರಕೂಟ, ರೀತಿ Hlā., Nr.; Si. 332).

ಹಿತ್ತಾಳಿ hittāḷi. = ಹಿತ್ತಳೆ, etc. (B. 1, 18; 4, 141; ಪುಷ್ಪಕ Mr. 527; ಆರಕೂಟ G.). ಮೆಯ್ಯೆಲ್ಲ ಚಿನ್ನ, ಕಿವಿ ಮಾತ್ರ ಹಿತ್ತಾಳಿ (Prv.).

ಹಿತ್ತಾಳೆ hittāḷe = ಇತ್ತಾಳೆ, ಹಿತ್ತಳೆ, etc. (ಪುಷ್ಪಕ, ರೀತಿಕೆ Nn. 123; ಆರಕೂಟ, ರೀತಿಕೆ Mr. 98, o. r. ಹಿತ್ತಾಳಿ; My.).

**ಹಿತ್ತಿಲ್ hittil. ಹಿತ್ತಿಲು.** = ಹಿತ್ತಲ್, etc., ಹಿತ್ತ್ಲು. (ನಿಷ್ಕುಟ Hlā.). ನಟ್ಟಹಿತ್ತ್ಲು. a vegetable garden.

**ಹಿತ್ತ್ಲು hittlu.** = ಹಿತ್ತಲ್, etc. (My.).

***ಹಿದಿರೆ hidire.** heap of wood cuts? fuel, bamboo? (fr. ಬಿದಿರ್?). ಹಲವು ಕಾಲ ಧಾವತಿಗೊಣ್ಡು ಒಟ್ಟಿದ ಹಿದಿರೆಯು ಒನ್ದು ಮಿಡುಕುಜಿಲ್ಲಿ ಬೇವನ್ತೆ Bv. 213.

**ಹಿದುಕು hiduku. 1.** = ಪಿಸುಕು 1, etc., ಚಿದಕು 1. to squeeze the soaked pulse called avare with the fingers and thus remove its skin (My.).

**ಹಿದುಕು hiduku. 2.** = ಚಿದಕು 2. the state of being freed from one's skin by squeezing (My.). — ಹಿದುಕವರೆ. -ಅವರೆ. = ಚಿದಕವರೆ. (My.).

**ಹಿನ್- hin.** = ಪಿಂ- (ಪಿಜ್-), etc., ಹಿಕ್-, ಹಿಂ- (ಹಿಜ್-), ಹಿಂ-(ಹಿಞ್-), ಹಿನ್ದೆ, etc. back, behind, etc. — ಹಿನ್ತಿರಗು. = ಹಿನ್ತಿರುಗು. (Cb. 57). — ಹಿನ್ತಿರುಗು. = ಹಿನ್ತಿರುಗು. (My.). — ಹಿನ್ತೆಗೆ. = ಹಿನ್ದೆಗೆ. (My.). — ಹಿನ್ದಲೆ. -ತಲೆ. the hinder part of the head (My.). — ಹಿನ್ತಿರಿಗಿಸು. -ತಿರಿಗಿಸು. to turn back (v. t.); to turn round (v. t., My.). ರೂಪರಸಾದಿವಿಷಯಗಳ ದೆಸೆಯಿನ್ದ ಕಣ್ಣು ಕಿವಿ ಮೊದಲಾದ ಇನ್ದ್ರಿಯಗಳನ್ನು ಹಿನ್ದಿರಿಗಿಸಿ ನಿಗ್ರಹಿಸುವಿಕೆ (ಪ್ರತ್ಯಾಹಾರ Si. 392). — ಹಿನ್ದಿರಿಗು. -ತಿರಿಗು. = ಪಿನ್ದಿರಿಗು. to turn back; to return; to turn round (My.). — ಹಿನ್ದಿರುಗು. -ತಿರುಗು. = ಪಿನ್ದಿರುಗು, ಹಿನ್ದಿರಿಗು. (My.). ಗಣಪತಿ ಹಿನ್ದಿರುಗಿ ನೋಡಲಾಗಿ (B. 4, 79). ಒನ್ದು ಹಾಜಿಕೆಗೆ ಬೇಟೆ ಸಿಗದಿದ್ದರೆ ಸಿಂಹವು ಹಿನ್ದಿರುಗಿ, ತನ್ನ ಸ್ಥಲಕ್ಕೆ ಬರುವದು (4, 212). — ಹಿನ್ದಿರುಗುವಿಕೆ. -ತಿರುಗುವಿಕೆ. turning back, etc. (ಸಾಧನ, ನಿವರ್ತನ Si. 437). — ಹಿನ್ದೆಗೆ. -ತೆಗೆ. = ಪಿನ್ದೆಗೆ. to draw back, to flinch (My.). ಯಾವ ಕಷ್ಟ ಬನ್ದರೂ ಹಿನ್ದೆಗೆಯನು (My.). — ಹಿನ್ದೆಸೆ. the direction that is behind (Bp. 25, 45; 27, 74; 39, 40; 42, 36. 84; 57, 88). — ಹಿನ್ನೆಲೆ. = ಪಿನ್ನೆಲೆ. back ground (Bh. 3, 19, 12).

ಹಿನ್ತಾಲ hintāla. *the marshy date tree, Phoenix* (or Elate) *paludosa.*

ಹಿನ್ತಾಲಿ hintāli. the Talipot or fan-palm (ಕರತಾಳ, ಶ್ರೀತಾಳಿ Mr. 359).

**ಹಿನ್ತೆ hinte.** = ಪಿನ್ತು, etc., ಹಿನ್ದೆ. (Śmd. 285 Cm.).

**ಹಿನ್ದ hinda.** = ಹಿನ್ದು, etc. — ಹಿನ್ದಗಡೆ. -ಕಡೆ. subsequent time; afterwards (ಅನು G.). ಹಿನ್ದಗಡೆಯಲ್ಲಿ (ಪಶ್ಚಾತ್); ಹಿನ್ದಗಡೆಯಲ್ಲಿ ಆಗುವ ಮನಸ್ಸಿನ ವಿಕಾರ (ಪಶ್ಚಾತ್ತಾಪ G.). ಮೊದಲು ಸುಳ್ಳು ಹೇಟಿ, ಹಿನ್ದಗಡೆ ಒಪ್ಪಿ ಕೊಳ್ಳುವದೇನು ಚನ್ದ? (B. 3, 83); ಇನ್ನಾದ್ರೂ ನನ್ದು ಕೆಲಸ ಮಾಡುತ್ತೇನೆನ್ದು, ಮೊದಲು ಒಪ್ಪಿ ಕೊಣ್ಡು, ಹಿನ್ದಗಡೆಗೆ ಹೊತ್ತು ಬನ್ದಾಗ, ತನ್ನಿನ್ದಾಗದೆನ್ದು, ಹೇಟಿ ಬಾರದು (4, 34). — ಹಿನ್ದ ಹಿನ್ದಕೆ. (*i. e.* ಹಿನ್ದಕೆ ಹಿನ್ದಕೆ). rep. (Bp. 22, 31; J. 19, 29). — ಹಿನ್ದ ಹಿನ್ದಕ್ಕೆ. = ಹಿನ್ದ ಹಿನ್ದಕೆ. (Bp. 27, 13).

**ಹಿನ್ದಲ hindala.** = ಹಿನ್ದಳ. (My.).

**ಹಿನ್ದಳ hindaḷa.** = ಹಿನ್ದಣ. that which is behind. ಹಿನ್ದು. (My.).

**ಹಿನ್ದು hindu.** = ಪಿನ್ದು q. v., etc., ಹಿಂಜು 2. that which is back (in place), behind, and previous, past; that which is afterwards or hereafter (ಪಿನ್ತು Śmd. 64; Bp. 24, 19); the direction behind, past time; subsequent time; behind, etc. genitive: ಹಿನ್ದಣ (Bp. 37, 23; 61, 34; J. 2, 57; 7, 30; 13, 48; 15, 30; 19, 24; 25, 8. 16), ಹಿನ್ದಣದ (Bp. 4, 61). ಹಿನ್ದಲ, ಹಿನ್ದಳ, ಹಿನ್ದನ (My.); dative: (ಹಿನ್ದಕ್ಕೆ), ಹಿನ್ದಕ್ಕೆ (Bp. 22, 15; 44, 22; B. 2, 18; 3, 59; 4, 112. 126. 132; 5, 70. 206), ಹಿನ್ದಕೆ (Bp. 11, 20; 26, 29: 40, 8; J. 13, 35); ablative: ಹಿನ್ದಿನ್ದ (B. 3, 23. 41. 42. 85; 4, 110), ಹಿನ್ದಿನ್ದ (B. 3, 71. 122), ಹಿನ್ದಿನಿನ್ದ (B. 4, 187; 5, 253). ಹಿನ್ದ ಸೆಳೆವುದು (ಪಾಷ್ಣಿ); ಪಡೆಯ ಹಿನ್ದಣ ಮೆಯ್ (ಪ್ರತಿಗ್ರಹ Hlā.). ಸೇನೆಯ ಹಿನ್ದಿದ್ದ ಅರೆನೆಲೆ (ಪ್ರತಿಗ್ರಹ Nr.). ಹಿನ್ದಣ ಭಾಗ (ಪಾಷ್ಣಿ, ಪಿನ್ತು Nn. 134). ಹಡಗು ಮುನ್ದಕ್ಕೆ ಹಾಯು ವನ್ತೆ ಕೆಳಗಡೆ ನೀರನ್ನು ಹಿನ್ದಕ್ಕೆ ತಳ್ಳುವ ಮರಮುಟ್ಟು (ನೌಕಾದಣ್ಡ Si. 84); ಹಿನ್ದಕ್ಕೆ ತಿರುಗದೇ ಇರುವವನು (ಅನಿವರ್ತಿ 292); ಬಚ್ಚಿಟ್ಟು ಕೊಣ್ಡುದನ್ನು ಹಿನ್ದಕ್ಕೆ ಕೊಡುವಿಕೆ (ನಿರ್ಯಾತನ 437); ಕಳೆದ ವರುಷ ಪರುತ್ ಎನ್ನುವದು, ಅದಕ್ಕಿನ್ತಲೂ ಹಿನ್ದಣ ಸಂವತ್ಸರ ಪರಾರಿ ಎನ್ನುವದು (476); ಹಿನ್ದಣ ದಿನ (ಪೂರ್ವೇದ್ಯುಸ್ 477; ಹ್ಯಸ್ 477). ಹಿನ್ದ ಹಿಡಿವುದು (ಪಾಷ್ಣಿ Mr. 484). ಹಿನ್ದಿನವ (B. 4, 190). ಹಿನ್ದಕ್ಕೆ ಮುನ್ದಕ್ಕೆ (B. 3, 126). ಹಿನ್ದಕ್ಕೂ ಮುನ್ದಕ್ಕೂ (4, 158). ಕಡ್ಲೆಗೆ ಮುನ್ದು, ಕಡಿವಾಣಕ್ಕೆ ಹಿನ್ದು.— ಹಿನ್ದಕ್ಕೆ ಮುನ್ದಕ್ಕೆ ದಾಸಯ್ಯನಾದರೆ ತಿರುಮನ್ತ್ರಾ ಹೇಟ್ಯಾನು. — ಹಿನ್ದಿನ ಭಿಕ್ಷೆ ಹೋಯಿತು, ಮುನ್ದಿನ ಕೋರಾನ್ನ ಹೋಯಿತು. — ಹಿನ್ದಿನಿನ್ದ ಆನೆ ಹೋಗ ಬಹುದು, ಮುನ್ದಿನಿನ್ದ ನುಸಿ ಹೋಗ ಬಾರದು (Prvs.). — ಹಿನ್ದಟ್ಟು. -ಅಟ್ಟು. to go or come after, to follow (My.). — ಹಿನ್ದಾಗು. -ಆಗು. to be or remain behind; to flinch (My.). — ಹಿನ್ದಾಡು. -ಆಡು. to speak behind a person. see Prv. s. ಎದುರಿಗೆ ಆಡು. — ಹಿನ್ದಿಕ್ಕಿ ಕೊಳ್. -ಇಕ್ಕಿ-. to place behind oneself, to shelter, to protect (Bh. 6, 5, 30). — ಹಿನ್ದಿರಿಸು. -ಇರಿಸು. to place behind or back (Bp. 18, 5). — ಹಿನ್ದುಕಡೆ. = ಹಿನ್ದುಗಡೆ. (Si. 288). — ಹಿನ್ದುಗಡೆ. -ಕಡೆ. = ಪಿನ್ದುಗಡೆ. a place that is behind; subsequent time (My.). ಹಿನ್ದುಗಡೆಯಲ್ಲಿ (ಪಿನ್ತೆ Śmd. 52 Cm.). see Si. 110. 209. 284. — ಹಿನ್ದುಗಳೆ. -ಕಳೆ. = ಪಿನ್ದುಗಳೆ. to flinch (J. 23, 11); to transgress, to reject (27, 30; Dp. 103, 2). — ಹಿನ್ದುಗೊಳ್. -ಕೊಳ್. = ಪಿನ್ದುಗೊಳ್. to go or come after, to follow (Bp. 28, 57; J. 28, 6). — ಹಿನ್ದುಭಾಗ. a portion or part that is behind (Si. 285). — ಹಿನ್ದು ಮುನ್ದು. = ಪಿನ್ದು ಮುನ್ದು. that is behind and in front (Rām. 6, 50, 10). 2, the hind part being in front, reversed position, etc. (ವಿಪರೀತ, ಪರಾಚೀನ Mr. 437). ಹಿನ್ದು ಮುನ್ದಾದಾತನು (ಪರಾಙ್ಮುಖ, ಪರಾಚೀನ Nr.). ಹಿನ್ದು ಮುನ್ದಾಗುಹ (ವಿಪರೀತ, ಪರಾಚೀನ Hlā.). ಹಿನ್ದು ಮುನ್ದಾದುದು (ವಿಪರೀತ Nn. 151). ದೂರವಾದ ಹಿನ್ದು ಮುನ್ದು ಯೋಚನೆಯುಳ್ಳವನು (ದೀರ್ಘದರ್ಶಿ Si. 233). [ಕೇಡಿಂಗೆ ಹಿನ್ದು ಮುನ್ದಾದರು ಭೀಷ್ಮರು Cv. 37]. ಎನ್ದೂ ಏಜದ ರಾವುತ ಕುದುರೇ ಹಿನ್ದು ಮುನ್ದಾಗಿ ಏಜಿದ (Prv.). — ಹಿನ್ದು ಮುನ್ದು ನೋಡು. to be circumspective or cautious, to hesitate (B. 5, 38. 55. 205). — ಹಿನ್ದು ಮುನ್ದೆ ನೋಡು. = ಹಿನ್ದು ಮುನ್ದು ನೋಡು. (B. 5, 178. 246). ಹಿನ್ದು ಮುನ್ದೆ ನೋಡದವ (ಚಪಲ G.). — ಹಿನ್ದುಟಿ. -ಉಟಿ. to remain or stay behind (J. 10, 46; 11 sum.; 17, 30).

ಹಿನ್ದು hindu. = ಹಿನ್ದೂ. (Tbh. of ಸಿನ್ಧು). a Hindu (C.; Mhr., H. ಹಿನ್ದು). — ಹಿನ್ದುಜನ. Hindus (My.). — ಹಿನ್ದುದೇಶ. India. (My.).

ಹಿನ್ದುಸ್ಥಾನ hindu-sthāna. land of Hindus; India; (My.; B. 2, 41; 3, 58; 4, 114; 5, 160).

**ಹಿನ್ದುಸ್ಥಾನಿ hindu-sthāni.** relating to India: a language containing many Saṁskṛita terms, Saṁskṛita tadbhavas, Persian and Arabic words, etc. (C.; B. 4, 129).

**ಹಿನ್ದೂ hindū.** = ಹಿನ್ದು. a Hindu. — ಹಿನ್ದೂಜನ. = ಹಿನ್ದುಜನ. (B. 3, 41; 4, 205). — ಹಿನ್ದೂಮಹಾಸಾಗರ. the Indian ocean (B. 4, 101).

**ಹಿನ್ದೆ hinde.** = ಪಿನ್ದೆ, etc., ಹಿಕ್-, etc., ಹಿಂಚೆ, ಹಿನ್ದ, ಹಿನ್ದು. the direction behind; past time; subsequent time; behind, after, towards the back part or rear, in the rear, at the back, backwards; in former times, ago; later in time, after, afterwards (ಪಶ್ಚಾತ್, ಅನು Si. 468; C.; Bp. 18, 53; 53, 17; 61, 57; J. 10, 33; 11, 2. 35; Bh. 1, 8, 20; 1, 10, 39). ತಾನು ಹಗೆಯ ಮೇಲೆ ಎತ್ತಿ ಹೋಹಲ್ಲಿ ಹಿನ್ದೆ ರಾಜ್ಯವನ್ ಉಪದ್ರವ ಮಾಡುವವನು (ಪಾರ್ಷ್ಣಿಗ್ರಾಹ Nr.). ಅಭಿಮುಖವಾಗದೇ ಹಿನ್ದೆ ತಿರಿಗಿದವನು (ಪರಾಙ್ಮುಖ, ಪರಾಚೀನ Si. 362); ಹಿನ್ದೆ ಸಂಗಡ ಹೋಗುವನ್ಥಾದು (ಅನುಗ, etc. 374). ಆ ಬಾೞೆ ಎಲೆಗಳ ನಡುವೆ ಗಿಡ ದೊಳಗಿನ್ದ ಒನ್ದಱ ಹಿನ್ದೆ ಒನ್ದು ಹೊಸ ಸುೞಿ ಏಱುತ್ತವೆ (B. 2, 37). ನಾನು ನಿಮ್ಮ ತಾಯಿ ತನ್ದೆಗಳ ಹಿನ್ದೆ ನಿಮ್ಮನ್ನು ಜೋಕೆ ಮಾಡಿದ್ದು ದೊಡ್ಡ ಮಾತಲ್ಲ (4, 200). ಎರಡು ಸಾವಿರದ ಮುನ್ನೂಱು ವರ್ಷಗಳ ಹಿನ್ದೆ (4, 214). ಹಿನ್ದೆ ಬಯ್ಯ ಬಾರದು, ಮುನ್ದೆ ಹೊಗೞ ಬಾರದು. — ಹಿನ್ದೆ ಹೋದರೆ ಹೇಡಿ, ಮುನ್ದೆ ಬನ್ದರೆ ಗರ್ವಿ. ಹಿನ್ದೆ ಮೞೆ, ಮುನ್ದೆ ಅರಿ (Prvs.). ನೀನು ಹೋಗು ಮುನ್ದೆ; ನಾನು, ಇದೇ, ನಿನ್ನ ಹಿನ್ದೆ ಬರುತ್ತೇನೆ (B. 4, 138). — ಹಿನ್ದೆ ಬೀೞು. to remain behind (My.); to become of less use (B. 5, 227). — ಹಿನ್ದೆ ಮುನ್ದೆ. — ಹಿನ್ದು ಮುನ್ದು. 3, backwards and forwards (Bp. 26, 30). — ಹಿನ್ದೆ ಮುನ್ದೆ ನೋಡು. = ಹಿನ್ದು ಮುನ್ದು ನೋಡು. (B. 3, 59; 4, 13. 37. 48; 5, 70). — ಹಿನ್ದೆಯಟ್ಟು. -ಅಟ್ಟು. to go or come after, to follow (Bp. 54, 38). — ಹಿನ್ದೆಯಾಡು. -ಆಡು. to backbite, to calumniate (My.). ಹಿನ್ದೆಯಾಡುವ ನುಡಿಯು ಘೋರವಿಷ, ಮನವೆ! (Dp. 172). — ಹಿನ್ದೆಯಿಟ್ಟುಕೊಳ್ಳು. -ಇಟ್ಟು-. to place behind oneself (My.). — ಹಿನ್ದೆ ಹತ್ತು. to follow (Bp. 28, 9). — ಹಿನ್ದೆ ಹೋಗು. to go or come after (Bp. 56, 58).

**ಹಿನ್ದೋಲ hindōla.** (= ಇನ್ದೋಳ). a swing, a hammock. 2, one of the rāgas (Cpr. 7, 62 va.).

**ಹಿನ್ನಿ hinni.** (= ಪಿನ್ನಿ?). the feathered part of an arrow (ಕರ್ತರಿ, ಪುಂಖ Nr.).

**ಹಿಪ್ಪರಿಗೆ hipparige.** = ಹಿಪ್ಪಿರಿಗೆ. N. of a town (Bp. 24, 4).

**ಹಿಪ್ಪಲಿ hippali.** = ಪಿಪ್ಪಲಿ (Śmd. 49). long pepper. (342; Hlā.; ಕೃಷ್ಣ, ಮಾಗಧ Nn. 47; ಕಣೆ, ಕೃಷ್ಣ, ಮಾಗಧ Mr. 138; Si. 145). ಹಿಪ್ಪಲೀ ಬೇರು (ಶಿರ G.). — ಹಿಪ್ಪಲಿನೇೞಳೆ. the mulberry, Morus indica (My.). — ಹಿಪ್ಪಲಿಬಳ್ಳಿ. a shrubby climber, wild and cultivated, the long pepper, Piper longum Lin. (St. & Pl.; Z.).

**ಹಿಪ್ಪಿ hippi.** (fr. ಹಿೞಿ). = ಹಿಪ್ಪೆ1, ಹೀದೆ. (My.). ಮದ್ಯದ ಹಿಪ್ಪಿ (ಕಿಣ್ವ, ನಗ್ನಹು Si. 348); ಗಾಣದ ಎಳ್ಳುಹಿಪ್ಪಿ (ಪಿಣ್ಯಾಕ 406).

**ಹಿಪ್ಪಿರಿಗೆ hippirige.** = ಹಿಪ್ಪರಿಗೆ. — ಹಿಪ್ಪಿರಿಗೆಕಲ್ಲಯ್ಯ. N. (Bp. 58, 12).

**ಹಿಪ್ಪಿಲಿ hippili.** = ಹಿಪ್ಪಲಿ. (R.).

**ಹಿಪ್ಪೆ hippe. 1.** = ಹಿಪ್ಪಿ, etc. the refuse or residue of what is squeezed out (Rām. 6, 46, 26; Te. ಪಿಪ್ಪಿ; M. ಪೀರೆ; T. ತಿಪ್ಪಿ); the refuse or residue of what has been used in the manufacture of spirits. ಕಿಣ್ವ ನಗ್ನಹು ಎನ್ದಡೆ ಬೀಜ ಸಂಜ್ಞಕಮ್ ಅಹ ಸುರಾರಮ್ಭದ್ರವ್ಯ; ಅದಱ ಹಿಪ್ಪೆಯೆನ್ದೂ, ಎಮ್ಬರು (Nr.).

**ಹಿಪ್ಪೆ hippe. 2.** = ಇಪ್ಪೆ1. the tree Bassia latifolia (My.; ಮಧೂಕ, ಗುಡಪುಷ್ಪ, ಮಧುದ್ರುಮ, etc. Si. 127). ಹಿಪ್ಪೇ ಹುವ್ವಿನ ಹೆಣ್ಡ (ಮಧ್ವಾಸವ etc. Si. 347).

**ಹಿಮ್- him.** = ಪಿಮ್-, etc., ಹಿನ್ದು. — ಹಿಮ್ಬಲ. help, refuge (My.). — ಹಿಮ್ಬಳೆ. a plain hollow silver ring worn by women on the wrist behind the kaḍaga (My.). — ಹಿಮ್ಬೞಿ. the time afterwards (Rām. 4, 2, 40); the place behind, the rear (Rām. 6, 50, 12). — ಹಿಮ್ಬಾಗ. = ಹಿಮ್ಬಾಗ. (My.). — ಹಿಮ್ಬಾಗು. to bend backwards (v. i., Si. 288). — ಹಿಮ್ಬಾರ. weight in the back part (of a cart, C.). — ಹಿಮ್ಬಾಲ. a hind tail: the state of being like a tail behind a person, following. — ಹಿಮ್ಬಾಲ ಮಾಡು. to follow. ಅವನ ಹಿಮ್ಬಾಲ ಮಾಡಿ ಕೊಣ್ಡು ಹೋದನು (My.). — ಹಿಮ್ಬಾಲಿಸು. to follow. ಅವನನ್ನು ಹಿಮ್ಬಾಲಿಸು (My.). ಹಿಮ್ಬಾಲಿಸಿ ಹೋಗುವಿಕೆ (ಸಾಧನ, ಅನುವ್ರಜ್ಯೆ Si. 437). — ಹಿಮ್ಬುಡ. the heel (ಪಾರ್ಷ್ಣಿ G.). — ಹಿಮ್ಬೆದೆ. = ಪಿಮ್ಬೆದೆ. (My.). — ಹಿಮ್ಭಾಗ. the hind part or portion (My.; B. 3, 99; 4, 82); the rear (J. 14, 12). — ಹಿಮ್ಮಡ. = ಹಿಮ್ಮಡಿ. (Rāghc. 17, 74; B. 5, 297). — ಹಿಮ್ಮಡಿ. the heel (My.). ಹಿಮ್ಮಡಿಯ ಗೂಟ ಕಟ್ಟುವ ಸೂತ್ರ (Prv.). — ಹಿಮ್ಮಡು. = ಹಿಮ್ಮಡಿ. ಕಾಲು ಹಿಮ್ಮಡು ಒಡೆಯುವ ರೋಗ (ವಿಪಾದಿಕೆ G.). — ಹಿಮ್ಮಿಡಿ. = ಹಿಮ್ಮಡಿ. (My.). — ಹಿಮ್ಮುಡಿ. a back knot of hair (ಹಸ್ತ, ಪಕ್ಷ, ಪಾಶ Hlā.). — ಹಿಮ್ಮೆಟ್ಟಿಸು. to cause to turn back or retreat (My.). — ಹಿಮ್ಮೆಟ್ಟು. to step or go backwards, to turn back, to retreat, to flinch (ಪೆಡ ಮೆಟ್ಟು Kk. 70; Śm. 64). see Bp. 6, 7; 11, 3; 14, 7; 22, 33; Bh. 8, 23, 24; J. 5, 29; 7, 44; 11, 4; 16, 22). — ಹಿಮ್ಮೇಳ. the music and singing in the rear of a company of dancing girls background music. (My.). ಹಿಮ್ಮೇಳ ಇದ್ದರೆ ಮುಮ್ಮೇಳ, ಇಲ್ಲದಿದ್ದರೆ ಸಮ್ಮೇಳ (Prv.).

**ಹಿಮ hima.** = ಹಿವ. *cold, frigid*, frosty, cool, dewy. 2, *frost, hoar-frost, ice, snow, dew, cold, coldness, coolness* (ಅಯ್ಕಿಲ್ Kk. 24; ಕುೞಿರ್, ಹಿವ, ಚಳಿ, ಅಯ್ಕಿಲ್ Śm. 16; ಕುೞಿರ್ 105; ಶಿಶಿರ Nn. 46; ತುಷಾರ, ಮಂಜು 81). 3, the cold season, cold, winter. 4, the Himālaya mountain (ಹಿಮಾಚಲ, ಹಿಮಪರ್ವತ 46; ಕುಭೃದ್ವಿಶೇಷ 81). 5, Śiva (ಶಂಕರ, ಈಶ್ವರ 46). 6, a king (ನೃಪ, ಅರಸು 46). 7, the moon (ಸುಧಾಕರ, ಚನ್ದ್ರ 46). 8, nectar, etc. (ಅಮೃತ 46). 9, water (ಜಲ, ಉದಕ 46; ಅರ್ಣ, ಉದಕ 81). 10, camphor (ಘನಸಾರ, ಕರ್ಪೂರ 81). 11, white (ಶುಭ್ರ, ಬಿೞಿದು 46). 12, red (ಜಾಜು, ಕಾವಿ 81). 13, fame (ಕೀರ್ತಿ 46). 14, the state of being chief (ಮುಖ್ಯವು 46). — ಹಿಮಗದಿರ. -ಕದಿರ. the cool-rayed: the moon (ಚನ್ದ್ರ Śs.). — ಹಿಮನ್ದಳೆ. -ಂ-ತಳೆ. snow to obtain or get (Bp. 1, 38).

**ಹಿಮಕರ hima-kara.** the moon (ಚನ್ದ್ರ Mr. 36; ಅಮೃತಕರ, ಚನ್ದ್ರಮ Nn. 35). 2, camphor.

**ಹಿಮಕರಕಾನ್ತ himakara-kānta.** = ಚನ್ದ್ರಕಾನ್ತ. the moon stone, etc. (My.).

**ಹಿಮಕರಭೂಷಣ himakara-bhūṣaṇa.** Śiva (Bp. 20, 38).

**ಹಿಮಕಿರಣ hima-kiraṇa.** the moon (Bp. 43, 43).

**ಹಿಮಕಿರಣಕಾನ್ತ himakiraṇa-kānta.** = ಹಿಮಕರಕಾನ್ತ. (Bp. 3, 12).

**ಹಿಮಕಿರಣಶಕಲಾಭರಣ himakiraṇa-śakala-ābharaṇa.** Śiva (Bp. 26, 45).

**ಹಿಮಕೃತ್ hima-kṛit.** the moon. 2, a certain metrical foot (Ch.).

**ಹಿಮಗಿರಿ hima-giri.** the Himālaya mountain.

**ಹಿಮಗಿರಿನನ್ದನೆ himagiri-nandane.** Pārvatī (Bp. 2, 37).

**ಹಿಮಗು hima-gu.** cold-rayed: the moon. 2, the moon-stone ಚನ್ದ್ರಕಾನ್ತ (Mr. 102).

**ಹಿಮಘರ್ಮ hima-gharma.** a cold fever, ague (ಶೀತಜ್ವರ Mr. 387).
**ಹಿಮಘೃಷ್ಟಿ hima-ghṛiṣṭi.** cool-rayed: the moon.
**ಹಿಮಘೃಷ್ಟಿಶೇಖರ himaghṛiṣṭi-śēkhara.** Śiva (Bp. 53, 15).
**ಹಿಮಚೂರ್ಣ hima-cūrṇa.** camphor (Grj. 2, 89).
**ಹಿಮನಗ hima-naga.** the Himālaya mountain.
**ಹಿಮನಗಸುತೆ himanaga-sute.** -ಸುತಾ. Pārvatī.
**ಹಿಮನಗಸುತೇಶ himanagasutā-īśa.** Śiva (Bp. 24, 52).
**ಹಿಮನಗಾತ್ಮಜೆ himanaga-ātmaje.** Pārvatī (Bp. 8, 30; 25, 43).
**ಹಿಮಪ್ರಭ hima-prabha.** the moon (Abh. P. 9, 74).
**ಹಿಮಭಾನು hima-bhānu.** the moon (Bp. 37, 31).
**ಹಿಮವತ್ hima-vat.** having frost or snow, snowy, icy, freezing, snow-clad. 2, *the Himālaya mountain.*
**ಹಿಮವತ್ಪರ್ವತ himavat-parvata.** = ಹಿಮೋತ್ಪರ್ವತ. the Himālaya mountain (My.).
**ಹಿಮವನ್ನಗ himavat-naga.** the Himālaya.
**ಹಿಮವನ್ನಗಜೆ himavannaga-je.** Pārvatī (Bp. 8, 40).
**ಹಿಮವಾರಿ hima-vāri.** dew-water: water distilled from various flowers (ಪನ್ನೀರ್ Mr. 336).
**ಹಿಮವಾಲುಕ hima-vāluka.** camphor (ಚೀನಿ, ತುಹಿನ, ಪನ್ನೆ Mr. 336).
**ಹಿಮವಾಲುಕೆ hima-vāluke.** *camphor.*
**ಹಿಮಸಂಹತಿ hima-saṁhati.** *a mass of ice or snow.*
**ಹಿಮಸಂಘಾತ hima-saṅghāta.** *a mass of ice or snow.*
**ಹಿಮಾಂಶು hima-aṁśu.** cool rayed: *the moon.* 2, camphor.
**ಹಿಮಾಂಶುಶೇಖರ himāṁśu-śēkhara.** Śiva. 2, sign for a metrically long syllable (Ch.).
**ಹಿಮಾಚಲ hima-acala.** the Himālaya mountain (ಹಿಮಪರ್ವತ Nn. 46, o. r. ಹಿಮಾದ್ರಿ).
**ಹಿಮಾಚಲತನುಜೆ himācala-tanuje.** Pārvatī (My.).
**ಹಿಮಾಚಲನನ್ದನೆ himācala-nandane.** Pārvati (Bp. 1, 62).
**ಹಿಮಾದ್ರಿ hima-adri.** the Himālaya mountain (ಕುಳಿರ್ವೆಟ್ಟು, etc. Ct. II, 10).
**ಹಿಮಾನಿ himāni.** *a mass of snow, a collection of ice and snow.*
**ಹಿಮಾಲಯ hima-ālaya.** abode of snow: the Himālaya mountain. (J. 2, 32; 5, 35).
**ಹಿಮಾವತಿ himā-vati.** *a kind of sōma or moon-plant.*
**ಹಿಮಾಹ್ವಯ hima-āhvaya.** called after ice: camphor. (R.).
**ಹಿಮಿಕೆ himike.** hoar-frost, cold dew (ಮಂಜಿನ ಹನಿ G.).
**ಹಿಮೆ hime.** ಹಿಮಾ. the cold season, winter; etc.
**ಹಿಮೋತ್ಪರ್ವತ himōtparvata.** Tbh. of ಹಿಮವತ್ಪರ್ವತ. (My.).
**ಹಿಮ್ಪು himpu.** = ಪಿಮ್ಪು, greatness, etc. (Rām. 6, 55, 39).
**ಹಿಮ್ಮಣ್ಣಿ himmaṇṇi.** = ಹಮ್ಮಿಣಿ. long money bag. (My.).
**ಹಿಮ್ಮತ್ತು himmattu.** protection, patronage, aid (My.; Br.; Mhr., H. ಹಿಮಾಯತ).
**ಹಿಯ್- hiy.** = ಹೀ 1–, q. v.— ಹಿಯ್ಯಾಳಿ. -ಆಳಿ. a despicable being (Bh. 8, 15, 7). — ಹಿಯ್ಯಾಳಿಕೆ. = ಹೀಯಾಳಿಕೆ. (Rām. 6, 50 12). — ಹಿಯ್ಯಾಳಿಸು. = ಹೀಯಾಳಿಸು. (My.).
**ಹಿರಣ್ಮಯ hiraṇ** (*i. e.* ಹಿರಣ್ಯ)**-maya.** made of gold, *golden.*
**ಹಿರಣ್ಯ hiraṇya.** *gold.* 2, *wealth, riches, property.* 3, N. of a khēcara (Cpr. 5, 88. 90; 6, 28).
**ಹಿರಣ್ಯಕ hiraṇyaka.** N. (Śmd. 203). 2, = ಹಿರಣ್ಯಕಶಿಪು. see ಹಿರಣ್ಯಕಹರ.
**ಹಿರಣ್ಯಕಶಿಪು hiraṇya-kaśipu.** N. of a king of the daityas, whom Viṣṇu as narasiṁha tore to pieces. (C. Bp. 47, 8; Bhāgavata 7, 1, 34. 35).
**ಹಿರಣ್ಯಕಹರ hiraṇyaka-hara.** Viṣṇu or Kṛiṣṇa (Mr. 18).
**ಹಿರಣ್ಯಗರ್ಭ hiraṇya-garbha.** *Brahmā.*
**ಹಿರಣ್ಯನಗರಿ hiraṇya-nagari.** N. of a town in svargalōka (Bh. 3, 12, 16).
**ಹಿರಣ್ಯನಾಭ hiraṇya-nābha.** the mountain Maināka. (My.).
**ಹಿರಣ್ಯಬಾಹು hiraṇya-bāhu.** golden-armed: *the river Śōṇa.*
**ಹಿರಣ್ಯಮಯ hiraṇya-maya.** = ಹಿರಣ್ಮಯ. (My.).
**ಹಿರಣ್ಯರೇತಸ್ hiraṇya-rētas.** *Agni;* Śiva.
**ಹಿರಣ್ಯವಾಹ hiraṇya-vāha.** the river Śōṇa. (My. Amara). 2, Śiva.
**ಹಿರಣ್ಯಶ್ರಾದ್ಧ hiraṇya-śrāddha.** money distributed at a śrāddha (My.).
**ಹಿರಣ್ಯಸುಬಾಹು hiraṇya-subāhu.** = ಹಿರಣ್ಯಬಾಹು. (ಶೋಣನದಿ Mr. 414).
**ಹಿರಣ್ಯಾಕ್ಷ hiraṇya-akṣa.** N. of a daitya, twin brother of Hiraṇyakaśipu; he was killed by Viṣṇu in his varāhāvatāra. (C. Bp. 47, 5; Bhāgavata 7, 1, 34).
**ಹಿರಣ್ಯೆ hiraṇye.** *one of the seven tongues of fire* (Mr. 46).
**ಹಿರಳೆ hiraḷe.** = ಇಳ್ಳಿ, ಈಳೆ, ಪೇರೀಳೆ, ಹಿಳ್ಳಿ2, ಹೀರುಳೆ, ಹೆರಳೆ, ಹೇರಳೆ, ಹೇರುಳೆ. a kind of bitter sour orange (ಕಂಚಿ My.; ಕಂಚೀ ಕಾಯಿ G.).
**ಹಿರಿ hiri. 1.** = ಪಿರಿ. extensiveness, etc. — ಹಿರಿ ಕಿಱಿಯರು. old and young (My.). — ಹಿರಿದು. = ಪಿರಿದು. that is extensive, large, big, great, superior, etc., and of advanced age (ವೃಹತ್, ಉರು, ಗುರು, ವಿಸ್ತೀರ್ಣ, ಪುರು, ಪೃಥು, ಮಹತ್, ವಿಶಾಲ, etc. Hlā.; My.); extensively, greatly, much, etc. (Bp. 24, 54; 55, 4; 57, 82; 61, 64). ಹಿರಿದು ಸತ್ತ (J. 25, 53). ಹಿರಿದು ಪಾಪವ ಮಾಡಿ (Sp.). ಹಿರಿದಾಗಿ ಇರ್ಪುದು (ಕಾಮ, ಪ್ರಕಾಮ, ಪರ್ಯಾಪ್ತ, ನಿತಾನ್ತ, ಭೃಶ, ಅತ್ಯರ್ಥ, ಅತಿಮರ್ಯಾದ, ಅತಿವೇಲ); ಹಿರಿದಪ್ಪ ಹೆಮ್ಮೆ (ಪ್ರಭಾವತೆ); ಸಮಾಸ ಹಿರಿದಾದ ಹಲವು ಪದಂಗಳು (ದಣ್ಡಕ); ಹಿರಿದಾಗಿ ಪೀಡಿಸುವುದು (ಸಪತ್ರಾಕರಣ); ಹಿರಿದು ಮಾಡುಹ (ವ್ಯಾಸ, ಪ್ರಪಂಚ, ವಿಸ್ತಾರ); ಹಿರಿದ ನೀವನು (ಸ್ಥೂಲಲಕ್ಷ, ಬಹುವ್ಯಯಿ Hlā.). ಹಿರಿದಾಹ ದಾನ (ದಾನೋತ್ಕೃಷ್ಟ Nn. 142, o. r. ವೆಗ್ಗಳವಹ ದಾನ). ಪರರ ದುಃಖವ ಕೇಳಿ, ಮನದಲಿ ಹಿರಿದು ಚಿನ್ತಿಸಿ (Akrūranīti 32). plural ಹಿರಿಯವು. ಒನ್ದಕ್ಕೊನ್ದು ಹಿರಿಯವಪ್ಪ ಮೀನು (ಚೀರಿಲ್ಲಿ, ತಿಮಿ, etc. Hlā.). see Bp. 35, 38; 38 28; 44, 61; 45, 7; Bh. 1, 8, 94. — ಹಿರಿದು ಕಿಱಿದು. that is old or young (Bp. 40, 15); that is big or small (B. 3, 39). — ಹಿರಿಬಸಳೇ ಬಳ್ಳಿ. a climbing potherb of two different species, Basella lucida or cordifolia Willd. (St. & Pl.). — ಹಿರಿಮಗ. an elder son; the eldest son (My.; B. 4, 3). feminine ಹಿರಿಮಗಳು (My.). — ಹಿರಿಮಣಿ. a superior pupil, the monitor in a school (My.). — ಹಿರಿಮದ್ದಿನ ಗಡ್ಡೆ. a medicinal shrub, Withania somnifera Dunal. (St. & Pl.).— ಹಿರಿಮೆಕ್ಕೇ ಗಿಡ. a climbing herb, Cucumis pubescens Willd. (St. & Pl.). — ಹಿರಿಯ. = ಪಿರಿಯ. 1, genitive of ಹಿರಿ. 2, ಹಿರಿ- ಅ 3, a great, eminent or noble man; a man more advanced in age, one who is older, an elder, a senior (ಉದಾತ್ತ, ಉದೀರ್ಣ, ಮಹಾತ್ಮ, ಉದಾರ Hlā.; ಮಾರಿಷ Hlā., Nr.). ನರ್ತನದ ಹಿರಿಯ (ಮಾರಿಷ Mr. 83). ತನ್ನಿನ್ದಲೂ ಹಿರಿಯನು (ಮೂಲಿಕ, ಅಗ್ರಜ Nn. 44, o. r. ತನ್ನಿನ್ದವೊ). — ಹಿರಿಯ ಅಕ್ಕನು. = ಹಿರಿಯಕ್ಕ. the eldest of the elder sisters (ಅತ್ತಿಕೆ Nr.). — ಹಿರಿಯ ಕಣಜ. a spacious corn-bin, etc. (Bp. 53, 18). — ಹಿರಿಯ ಕಳಿವಿಹಣ್ಣು. a large ripe Carissa berry (R.). — ಹಿರಿಯಕ್ಕ. = ಹಿರಿಯ ಅಕ್ಕನು. (My.). ಹಿರಿಯಕ್ಕನ ಚಾಳಿ ಮನೇ ಮಕ್ಕಳಿಗೆಲ್ಲ (Prv.). — ಹಿರಿಯಣ್ಣ.

-ಅಣ್ಣ. the eldest of the elder brothers (My.). — ಹಿರಿಯ ತಳಿಗೆ. a large metal plate (ಸ್ಥಾಲ Nr.). — ಹಿರಿಯ ದುಪ್ಪಿ. (ರಾಮ Si. 170). — ಹಿರಿಯ ನಾಚಯ್ಯ. N. (Bp. 51, 65. 74). — ಹಿರಿಯ ಪೀಠ. a large pedestal or seat (Bp. 57, 53). — ಹಿರಿಯ ಬಸದಿ. a large Jaina temple (Bp. 52, 32). — ಹಿರಿಯ ಬಿಟ್ಟೇಱು. a large missile (ಬಿಜ್ಜಲಬಿಟ್ಟೇಱು Śmd. II). — ಹಿರಿಯ ಬೆಲೆ. high price or value. ಹಿರಿಯ ಬೆಲೆಯ ಸೀರೆ (ಮಹಾದಾನ Nr.). — ಹಿರಿಯ ಬೊಬ್ಬುಲಿಮರ. a tall Babool tree (Bp. 20, 10). — ಹಿರಿಯ ಭಕ್ತ. a senior devotee (Bp. 55 sum.; 55, 4. 57). — ಹಿರಿಯ ಭಕ್ತೆ. a senior female devotee (Bp. 57, 56). — ಹಿರಿಯ ಭವನ. a large mansion (Bh. 1, 8, 70). — ಹಿರಿಯ ಮಗ. = ಹಿರಿಮಗ. (B. 3, 15). feminine ಹಿರಿಯ ಮಗಳು (B. 5, 158). — ಹಿರಿಯಯ್ಯ. -ಅಯ್ಯ. = ದೊಡ್ಡಪ್ಪ. (J. 27, 11). — ಹಿರಿಯರ್. ಹಿರಿಯರು. eminent persons; elders; ancestors (Bp. 28, 47; 37, 3; 57, 8; J. 16, 28; My.). ಹಿರಿಯರಿಗೆ ಇದಿರಾಗಿ ಏೞುವುದು (ಅಭ್ಯುತ್ಥಾನ, etc. Nr.). ಹಿರಿಯರ ಹೇೞಿಕೆಯಿನ್ದ ನವ್ಬ ತಕ್ಕ ಕಥೆ (ಐತಿಹ್ಯ Si. 236); ಹಿರಿಯರ ಬುದ್ಧಿ (ಅನುಭಾವ 459). ಕನ್ನಡದ ನುಡಿಯೆನ್ದುಪೇಕ್ಷಿಸಲಿನ್ನು ಹಿರಿಯರಿಗುಚಿತಮ್ ಅಲ್ಲದು (Abhā. 1, 4). ಬಲ್ಲೆನೆನ್ದೆಮ್ಬುವರೆಲ್ಲರು ಹಿರಿಯರೇ? ಸೊಲ್ಲಿಸಿ ಭೇದವನಱಿದೊಡೆ ಕಿಱಿಯ ತಾನೆಲ್ಲರಿಗೆ ಹಿರಿಯ! (Sp.). ಜಡೆಯುಳ್ಳ ಹಿರಿಯರಿಗೆ, ಹೆಡೆಯುಳ್ಳ ಸರ್ಪನಿಗೆ ನಡುಗುತ್ತ ನಮಿಸಿ ನಯದಿನ್ದೆಚ್ಚಱನು ಬಿಡದೆ ಕೊಡೆ ಭಕ್ತಿ (Sp.). — ಹಿರಿಯರುಗಳು. = ಹಿರಿಯರು. (ಆರ್ಯರು, ದೇವ ಭೂಮಿಜರು Nn. 78). — ಹಿರಿಯ ಲಿಂಗ. a big liṅga (Bp. 57, 53). — ಹಿರಿಯವ. -ಅವ. a man who is older (My.; G. 319). — ಹಿರಿಯ ಶೂಲ. a large pike or stake (Bp. 39, 51). — ಹಿರಿಯ ಹಬ್ಬ. a great festival (Bp. 28, 21). — ಹಿರಿಯ ಹಾವು. a large snake (ಅಜಗರ, ಶಯು, ವಾಹಸ, etc. Mr. 400). — ಹಿರಿಯಳು. an elder female; the oldest female (My.). ತನ್ನಿನ್ದಲು ಹಿರಿಯಳು (ಜ್ಯೇಷ್ಠೆ Nn. 128). — ಹಿರಿಯಾಕೆ. -ಆಕೆ. = ಹಿರಿಯಳು. (My.). — ಹಿರೊಡೆ. *i. e.* ಹಿರಿಯ ಒಡೆ. the French rocks, Pāṇḍava pura (My.).

**ಹಿರಿ hiri.** 2. to separate into portions, to break up, to pull to pieces, to demolish (Bp. 27, 48; 49, 42. 46; 51, 52. 64; 53, 29; My.; T. ಪಿರಿ, to separate, disunite, disjoin, etc.; see ಪಿಕ್ಕು); to pull (a thing) out of (a bundle, fire, etc., My.; B. 2, 12); to pull from a sheath, to unsheathe (My.; B. 5, 47); to take from (a string, as a pearl or pearls, My.). 2, to be broken up or demolished (My.); to fall out of (a bundle, etc., My.); to fall from (a string, My.). ಚೆನ್ದ ಮನೆಗೆ (or ಮನೆಯಲ್ಲಿ) ಹಿರಿದದ್ದೇ ಲಾಭ (Prv.).

**ಹಿರಿ hiri.** 3. = ಹಿರಿದು. P. p. of ಹಿರಿ 2, in ಹಿರಿ ಹಿರಿದು (Bp. 27, 48; 49, 42; 51, 52. 67).

**ಹಿರಿಯತನ hiriyatana.** exalted state or position, greatness, dignity (My.; B. 5, 219; Bp. 28, 33; 38, 22). — ಹಿರಿಯತನಗೆಡು. -ಕೆಡು. an exalted position to be lost (Bp. 56, 19).

**ಹಿರುಕ್ hiruk.** *without, except.* 2, *in the midst of, amongst.* 3, *near.* 4, below.

**ಹಿರೆ hire.** = ಹಿರಿ 1, etc. elder, extensive, etc. — ಹಿರೆಮಗ. = ಹಿರೆಯ ಮಗ. (My.). — ಹಿರೆಯ ಅಕ್ಕ. = ಹಿರಿಯ ಅಕ್ಕನು. (ಅತ್ತಿಕೆ G.). — ಹಿರೆಯ ಅಣ್ಣ. = ಹಿರಿಯಣ್ಣ. (ಅಗ್ರಿಯ, ಅಗ್ರೀಯ, ಜ್ಯೇಷ್ಠ G.). — ಹಿರೆಯ ಮಗ. = ಹಿರಿಯ ಮಗ. (B. 1, 1). — ಹಿರೆಹೆಣ್ಡತಿ. = ಹಿರೇ ಹೆಣ್ಡತಿ. the wife first married by a man (My.). ಹಿರಿ ಹೆಣ್ಡತಿ ಒಳ್ಳೆಯವಳೆನ್ದರೆ, ಕಿಱಿಯವಳು ಕೆಟ್ಟವಳೆನ್ದು ಹೇೞ ಬೇಕಾ? (Prv.). — ಹಿರೇ ಅಣ್ಣ. = ಹಿರೆಯ ಅಣ್ಣ. (B. 2, 42). — ಹಿರೇ ಕಣಗಿನ ಮರ. a middle-sized tree, Garcinia xanthochymus Hook. f. (St. & Pl.). — ಹಿರೇ ಕುದುರೆ. a big horse. ತಾನು ತಿನ್ಬೋದು ಪಲ್ಲೇ ಸಪ್ಪು, ಹಿರೇ ಕುದುರೇ ಚೇಷ್ಟೆ (Prv.). — ಹಿರೇ ಬರಸ. Euphorbia hirta Willd. (Z.). — ಹಿರೇ ಮಗಳು. an elder daughter; the oldest daughter. ಎಮ್ಮೇ ಕಱು ಸಾಯ ಬೇಕು, ಹಿರೇ ಮಗಳ ಗನ್ಡ ಸಾಯ ಬೇಕು (Prv.). — ಹಿರೇ ಮರ. a lofty tree, Ailanthus excelsa Roxb. (St. & Pl.). — ಹಿರೇ ರೋಗ. a dysenterical epidemic of cattle (S. Mhr.); a kind of leprosy (S. Mhr.). — ಹಿರೇ ಹೆಣ್ಡತಿ = ಹಿರೆಹೆಣ್ಡತಿ. (Si. 183).

**ಹಿರೆಯತನ hireyatana.** = ಹಿರಿಯತನ. (My.; G. 485).

**ಹಿರ್ರನೆ hirrane.** elatedly, greatly, in ಹಿರ್ರನೆ ಹಿಗ್ಗು (B. 3, 43. 80).

**ಹಿಲಮೋಚಿಕೆ hilamōcike.** *the pot-herb Hingtṣa repens* Roxb. (see Si. 162).

**ಹಿಲ್ಲಿ hilli.** = ಪೀಲಿ q. v., ಹೀಲಿ. a peacock's tail.

**ಹಿವ hiva.** Tbh. of ಹಿಮ snow. (Śmd. 347; Śm. 16; ಕರ್ಪೂರ Ci. I, 49). — ಹಿವಗದಿರ. -ಕದಿರ. cool-rayed: the moon (Kk. 44).

**ಹಿಷಾರೆ hiṣāre.** = ಇಷಾರೆ. (My.). a signal.

**ಹಿಸಕು hisaku.** = ಇಸಕು, ಇಸಿಕು, ಪಿಸುಕು, ಪಿಸುಂಕು, ಹಿಚಿಕು, ಹಿಚುಕು, ಹಿದುಕು 1, ಹಿಸಿಕು, ಹಿಸುಕು. to squeeze, to press, as a fruit; to press closely, as the throat; to knead; to shampoo (My.).

**ಹಿಸಾಬು hisābu.** numbers, practical arithmetic; computation, calculation; an account; a register of debts, costs, etc. (My.; Mhr., H. ಹಿಶೇಬ, ಹಿಶೋಬ, ಹಿಸಾಬ).

**ಹಿಸಿ hisi.** (= ಹಿಳಿ). to burst (v. i., as a jack fruit, a very tight jacket, My.; as a female breast, J. 11, 17); to crack (as a wall, a cooking vessel, My.). 2, to squeeze (a ripe fruit) so as nearly to separate (it) into two pieces (My.).

**ಹಿಸಿಕು hisiku.** = ಹಿಸಕು, etc. (My.; Si. 381).

**ಹಿಸುಕು hisuku.** = ಹಿಸಕು, etc. (My.).

**ಹಿಸುಕುವಿಕೆ hisukuvike.** squeezing, etc. (ಮರ್ದನ, ಸಂವಾಹನ Si. 395).

**ಹಿಸುಣ hisuṇa.** = ಪಿಸುಣ. Tbh. of ಪಿಶುನ. a betrayer, etc. (Śmd. 342, 364; Rām. 6, 44, 10).

**ಹಿಸುಣಿಕೆ hisuṇike.** slander, etc. (Bh. 6, 1, 19).

**ಹಿಸ್ಸೆ hisse.** a share, part (My.; Si. 330; Mhr., H. ಹಿಸ್ಸಾ).

**ಹಿಸ್ಸೆದಾರ hisse-dāra.** a shareholder (My.; Mhr., H. ಹಿಸ್ಸೇದಾರ).

**ಹಿಹಿಹಿ hihihi.** imitation of the sound of giggling (My.; Mhr.).

**ಹಿಳ hiḷa.** a crack (ಮರಬಿಡಿಕು Mr. 385, o. r. ಮಡಬಿಡುಕು Mr. 385; see ಪೆಳವು).

**ಹಿಳಲು hiḷalu.** = ಹಿಣಿ, etc. a bull's or bullock's hump (My.; ವಹ, ಷಣ್ಡಸ್ಕನ್ಧಪ್ರದೇಶ Si. 319).

**ಹಿಳಿ hiḷi.** 1. (= ಹಿಸಿ). to crack, to burst, to split (v. i., ದಲನಾರ್ಥ Śmd. Dh.; ಬಿರಿ Śmd. I; T. ಪಿಡ್, ಪಿಳ್, ಪಿಳ; see ಪೆಳವು). ಹಿಳ್ಳನೆ ಹಿಳಿದುದು (Śmd. Dh.). see Bh. 1, 20, 54. 57; 3, 2, 2.

***ಹಿಳಿ hiḷi.** 2. = ಪಿೞ, ಹಿೞ. to squeeze out. ಪರಸ್ತ್ರೀಗಳು ಪಿದವರ ಗಾಣದಲ್ಲಿಕ್ಕಿ ಹಿಳಿಯನೇ? Bv. 565; Cv. 286.

**ಹಿಳಿಗೆ hiḷige.** = ಪೆಡಗೆ, etc., ಹಿಳ್ಗೆ, ಹೆಳ್ಗೆ. Tbh. of ಪಿಟಕ. a basket, etc. (or ಪೇಟಕ, ಪೇಟಿಕೆ). a basket (ಕಾಣ್ಡಾಲ, ಪಿಟ Nr., o. rs. ಪಿಟಕ, ಪೇಟಕ).

**ಹಿಳಿಲ್ hiḷil.** ಹಿಳಿಲು. = ಹಿಳಲು, etc. (ಕಕುದ Nn. 143; My.).

**ಹಿಳುಕು hiḷuku.** = ಪಿಳುಕು, ಪಿಳ್ಕು q. v. the lower part of an arrow. (Bh. 6, 4, 141; 8, 23, 25. 44). ಅಮ್ಬಿನ ಹಿಳುಕು (ಪುಂಖ Nr.), ತೆತ್ತಿಸುವ ಹಿಳುಕು (ಕರ್ತರಿ, ಪುಂಖ Mr. 295).

**ಹಿಳ್ಗು hiḷgu.** = ಪಿಳಿಗು. to break, to crack, to burst (v. i., ಬಿರಿ, ಹಿಳಿ Śmd. I Mdb.).

**ಹಿಳ್ಗೆ hiḷge.** = ಹಿಳಿಗೆ, etc. see s. ಹೆಳ್ಗೆ.

**ಹಿಳ್ಳನೆ hiḷḷane.** with a cracking noise; crack. ಹಿಳ್ಳನೆ! ಹಿಳಿದುದು (Śmd. Dh.).

**ಹಿಳ್ಳಿ hiḷḷi.** = ಹಿಳ್ಳೆ 1. a branch, a shoot, a rootlet. — ಹಿಳ್ಳಿಯೊಡೆ. -ಒಡೆ. shoots to break forth. ಹಿಳ್ಳಿಯೊಡೆದು ಬೆಳೆದ ತೃಣಧಾನ್ಯಂಗಳು (ಗುಲ್ಮ Nr.).

**ಹಿಳ್ಳೆ hiḷḷe. 1.** = ಹಿಳ್ಳಿ. — ಹಿಳ್ಳೆವರೆ. -ಪರೆ. rootlets to spread. ಹಿಳ್ಳೆವರೆದ ಗೆಡ್ಡೆ (ಕರಹಾಟ Nr.).

**ಹಿಳ್ಳೆ hiḷḷe. 2.** = ಹಿರಳೆ, etc. a kind of sour orange. (My.).

**ಹಿಳ್ಳೆ hiḷḷe. 3.** (= ಚಿಣಿ 1, etc., *cf.* ಪೆಳವು?). — ಹಿಳ್ಳೆಕೋಲು. = ಚಿಣಿಕೋಲು. a small piece of wood or a piece of a stick used in the game of tip-cat (My.). 2, a new born babe. *cf.* ಪಿಳ್ಳೆ.

**ಹಿೞಿ hiḻi.** = ಪಿೞ್. to squeeze out, to deprive of juice or moisture or essence, etc. (ರಸಮಂ ಹಿೞ್ದು Śmd. I; ನಿರ್ದ್ರವಕರಣ Śmd. Dh.; Grj. 6, 5; 9, 18; 10, 74; J. 31, 26).

**ಹೀ hī. 1.** = ಹಿಯ್. (M.; T.; Tu. ಪೀ excrements; fie, for shame = ಚೀ; *cf.* ಪೀ; vedic Sk. ಹೀಡ್, to blame, abuse, treat disrespectfully or with contempt; *cf.* Sk. ಹೀ). — ಹೀಗಳೆ. -ಕಳೆ. to scoff, to revile. ಹೀಗಳೆದು ಗೇಲಿಗೊಳಿಸುವಿಕೆ (ಅಚ್ಛುರಿತಕ, ಹಂಗಿಸಿ ನಗುವದು Si. 73). — ಹೀಗಳೆ. -ಕಳೆ. = ಹೀಗಳೆ. — ಹೀಗಳೆಯುವಿಕೆ. -ಕಳೆಯುವಿಕೆ. scoffing, etc. (ಅವರ್ಣ, ಆಕ್ಷೇಪ, ನಿರ್ವಾದ, ಪರಿವಾದ, ಅಪವಾದ, ಉಪಕ್ರೋಶ, ಜುಗುಪ್ಸೆ, ಕುತ್ಸೆ, ನಿನ್ದೆ Si. 57). — ಹೀಯಾಳಿಕೆ. -ಆಳಿಕೆ. = ಹಿಯ್ಯಾಳಿಕೆ. scoffing, etc. (ನಿನ್ದೆ, ಜಿಹ್ಮಯೋಗ G.; not My.). — ಹೀಯಾಳಿಸು. -ಆಳಿಸು. to address with contumelious language, to treat with opprobrious and contemptuous language, to scoff, to revile (My.; B. 4, 34; ನಿನ್ದಿಸು G.). — ಹೀಹಾಳಿ. (ಹೀಯಾಳಿ). scoffing: disrespectful, rough or cruel treatment (ಕಾಲ್ದುೞ Bhn. 20; Bh. 8, 11, 39; text corrupt, one MS. ಹೀಯಾಳಿ). — ಹೀಹಾಳಿಗೆಡಸು. -ಕೆಡಸು. to let fall or drop scoffing words, to scoff, to revile (Bh. 7, 1, 26). — ಹೀಹಾಳಿಸು. = ಹೀಯಾಳಿಸು. (Bp. 21, 23; Bh. 8, 13, 1).

**ಹೀ hī. 2.** = -ಈ 7, (-ಹಿ). thou art. see ಇರ್ದ್ಹೀ (*e. g.* B. 1, 7. 15; 2, 48).

**ಹೀ hī.** *an interjection expressing surprise: ah! ah!*, and fatigue, despondency or sorrow: ah! alas! (Sk., Mhr. ಹೀಹೀ. = ಹಿಹಿ, q. v.).

**ಹೀಗ್ hīg.** = ಪೀಕ್. — ಹೀಗ್ಗಾಲಿ. = ಪೀಕ್ಗಾಲಿ. a thorny shrub. (Z.).

**ಹೀಗೆ hīge.** = ಇಹಗೆ, etc. in this manner, thus (ಇನ್ತು Śmd. 385 Cm.; ಏವಂ Si. 469; C.; B. 1, 24; 2, 53). ಹೀಗ್ಯಾಕೆ? (B. 5, 146). ಇಷ್ಟು ಹೊತ್ತು ಹೀಗೆ ಅಭಿನಯಿಸಬೇಕೆಮ್ಬ ಗೊತ್ತು (ತಾಲ Si. 64); ಹೀಗೆ ನಡಕೊಳ್ಳಬೇಕೆನ್ದು, ಅಧಿಕಾರದಿನ್ದ ವಿಧಿಸಿ ಹೇೞುವಿಕೆ (ಆಜ್ಞೆ, etc. 265); ಹೀಗಾದೀತೆಮ್ಬ ಕಯಸ್ (ಕಿಲ, ಹೀಗಷ್ಟೆ, ಹೀಗಲ್ಲವೆ 470). — ಹೀಗೆಯೆ. -ಏ 3. even in this manner, in this very manner (ಏವಂ Si. 103. 189); ಹೀಗೆಯೆ ಸರಿ ಎಮ್ಬುವಿಕೆ (ಏವಂ 475). — ಹೀಗೆಯೇ. -ಏ 2. in this very manner; without a particular or plausible cause (B. 3, 123). ಇದು ಹೀಗೆಯೇ ಮಾಡಬೇಕೆಮ್ಬ ವೇದೋಕ್ತವಾದ ವಿಧಾನ (ಕಲ್ಪ, etc. Si. 248). — ಹೀಗೇ. -ಏ 2. = ಹೀಗೆಯೇ. (B. 2, 28; 5, 104). ಇದು ಹೀಗೇ ಸರಿ ಎಮ್ಬ ನಿಶ್ಚಯ (ನೂನಂ Si. 469). ಹೀಗೇ ಬಾಯಾಡಿಸುವವಳು ಅವಲಕ್ಕೀ ಕಾೞು ಕಣ್ಡರೆ ಬಿಟ್ಟಾಳೇ? (Prv.). — ಹೀಗೋ. -ಓ 3. in this manner? thus? ಹಾಗೆ ಅಲ್ಲದಿದ್ದರೆ ಹಾಗೋ? ಹೀಗೋ? (ಅಹೋ, etc. Si. 472).

**ಹೀಂಗೆ hīṅge.** = ಇಹಂಗೆ, etc., ಹೀಗೆ q. v. (ಇನ್ತು Śmd. 61. 65 Cm.; My.).

**ಹೀಚು hīcu.** = ಈಚು 2, ಪಿಂಚು 2 q. v. a fruit newly come forth from blossom. (ಎಳೆಗಾಯಿ, ಮಿಡಿ, ಹದಿರ್ Śm. 22; My.; B. 3, 90). — ಹೀಚುಗಾಯಿ. -ಕಾಯಿ. = ಹೀಚು. (G. 142).

**ಹೀಜು hīju. 1.** = ಈಜು 1. to swim (My.).

**ಹೀಜು hīju. 2.** = ಈಜು 2. swimming (My.).

**ಹೀಜು hīju. 3.** = ಪಿಂಜು 1, etc. to rend (v. t., as cloth); to be rent (as cloth, My.).

**ಹೀದೆ hīde.** = ಈದೆ, ಹಿಪ್ಪೆ, etc. the refuse or residue of what has been squeezed out (My.).

**ಹೀನ hīna.** *left, forsaken, relinquished, abandoned*, deserted, neglected; excluded, shut out from; deprived of, free from, devoid of, destitute of, without, bereft of; feeble; *deficient, defective*, faulty, inferior, insufficient; deducted, subtracted, minus; *mean, base, vile, bad, low; avaricious.* 2, a forsaken man, etc., etc.; that is bad, etc. (see *e. g.* ಒಳಿತು-). ಹೀನನ ಸಂಗ ಮಾನಿಗೆ ಆಗದು, ಮಾನಿಯ ಸಂಗ ಹೀನಗೆ ಆಗದು. — ಜೀನನ ಮನಸ್ಸು ಯಾವಾಗ್ಯೂ ಹೀನವೇ ಸರಿ. — ಬೋಣವಾದರೆ ಹೀನನಿಗೆ ಆಗದೇ? (Prvs.). see ಗರ್ವ-, ಸಿ-, ವಿಕ್ರಮ-, ವಿ-, ವೃದ್ಧಿ-. — ಹೀನಕೆಲಸ. a low occupation; a base act (My.). — ಹೀನಚಾಳಿ. a base practice or habit (My.). — ಹೀನಸುೞಿ. a bad, disfiguring curl (or vile deceit). ಹೀನ ಸುೞಿ ಬೋಳಿಸಿದರೆ ಹೋದೀತೆ? (Prv.).

**ಹೀನಜಾತಿ hīna-jāti.** low-born, of low caste, outcast, degraded, vile (J. 10, 39). 2, a low caste (My.). 3, an inferior kind (My.).

**ಹೀನತನ hīnatana.** meanness, baseness. ಆನೆಗಂಜಿಕೆ ಯಾಕೆ? ಶ್ವಾನಗೆ ಸೊಬಗು ಯಾಕೆ? ದಾನಿಗೆ ದೀನತನ ಯಾಕೆ? ಜ್ಞಾನಿಗೆ ಹೀನತನ ಯಾಕೆ? (Sp.).

**ಹೀನತೆ hīnate.** = ಹೀನತ್ವ. the state of being deprived of or devoid of, etc. (Bp. 44, 65; see ಭಕ್ತಿ-, ವಿ-).

**ಹೀನತ್ವ hīnatva.** defectiveness, deprivation, destitution, the state of being without, absence of. see ವಿ-.

**ಹೀನದಶೆ hīna-daśe.** a hapless, miserable state (My.).

**ಹೀನಯಿಸು hīnaysu.** to degrade by contumelious language (My.).

**ಹೀನವಾದಿ hīna-vādi.** *overcome in argument, worsted, silenced; cast in law;* making a defective statement, insufficient or in-admissible (as a witness).

**ಹೀನಸರ hīna-sara.** Tbh. of ಹೀನಸ್ವರ, q. v.

**ಹೀನಸ್ವರ hīna-svara.** a defective or bad, disagreeable voice (My.; ಅಧ್ವಾನ, ಹೀನಸರ Nn. 164).

**ಹೀನಾಂಗ hīna-aṅga.** deficient in limb, crippled, maimed, mutilated, imperfect, defective. (R.).

***ಹೀನಾಧಿಕಪ್ರಶಂಸಾಗುಣ hīna-adhika-praśaṁsā-guṇa.** a merit in poetry. Kr. 3, 88.

***ಹೀನಾಧಿಕಪ್ರಶಂಸಾದೋಷ hīna-adhika-praśaṁsā-dōsa.** a defect in poetry. Kr. 3, 89.

**ಹೀನಾಯ hīna-āya.** defective gain: want (ಕೊರತೆ G.); dishonour (My.). ಅಪ್ಪ ಹೊಡದ್ದಕ್ಕಿನ್ತ ಅಕ್ಕ ಅನ್ದದ್ದು ಹೀನಾಯ ವಾಯಿತು (Prv.).

**ಹೀನೋಪಮೆ hīna-upame.** N. of a simile (Kāvy. III, 3, B, 75 seq.).

**ಹೀರ್ hīr. 1.** = ಪೀರ್, ಹೀರು. to suck, etc. (ರಸಾಸ್ವಾದನ Śmd. Dh.; ಹಿತರಸಸ್ವೀಕಾರ Śm. 104). P. p. ಹೀರ್ದು.

**ಹೀರ್ hīr. 2.** (Tbh. of ಹೀರ?). an ornament (ಭೂಷಣ Śmd. Dh.; Śm. 104).

**ಹೀರ hīra.** a thunderbolt. 2, a diamond (Cpr. 7, 129). 3, a snake. 4, a necklace. 5, a lion. 6, Śiva. 7, N.

**ಹೀರಕ hīraka.** *a diamond.*

**ಹೀರಾವಳಿ hīra-āvaḷi.** a necklace of diamonds (Bp. 4, 37).

**ಹೀರಿ hīri.** = ಹೀರೆ. ಹೀರೀ ಕಾಯ ಬಳ್ಳಿ (ಕೋಶಾತಕಿ G.).

**ಹೀರು hīru.** = ಹೀರ್ 1, etc. P. p. ಹೀರಿ (C.). ರಕ್ತವನ್ನು ಸೋಯಿಸದನ್ತೆ ಹೀರಿಕೊಳ್ಳಲುಳ್ಳ ಜನ್ತು (ರಕ್ತಪೆ, ಜಿಗಣೆ Si. 89); ಆನೆಗಳ ರಕ್ತವನ್ನು ಹೀರಲುಳ್ಳ ದೊಡ್ಡ ಜಿಗಣೆ (ದುರ್ನಾಮ, etc. 90). ಹೀರಿಕೊಳ್ಳುವದು (G. 298). ಬೇರುಗಳು ನೆಲದೊಳಗಿನ ರಸವನ್ನು ಹೀರಿಕೊಣ್ಡು (B. 3, 35). ಎಲೆಗಳು ತಮ್ಮ ಬೆನ್ನ ಮೇಲಿರುವ ಹಲವು ತೂತುಗಳಲ್ಲಿ ಹವೆಯೊಳಗಿನ್ದ ತಮಗೆ ಬೇಕಾದ ವಾಯುವನ್ನು ಹೀರಿಕೊಣ್ಡು (3, 36).

**ಹೀರುಳೆ hīruḷe.** = ಹಿರಳೆ, etc. a kind of sour orange. see s. ಹೇರುಳೆ.

**ಹೀರೆ hīre.** = ಈರೆ, ಹೀರಿ 2. the vegetable Luffa acutangula Roxb. or Cucumis acutangulus Lin. (C.; T. ಪೀರ್, ಪೀರ್ಕ್ಕು; Tu. ಪೀರೆ; Te. ಬೀರ; see Mr. s. ಜಾಲಿನಿ). ಕಾಡ ಹೀರೆ (ಧಾಮಾರ್ಗವ, ಘೋಷಕ Nr.; ಘೋಷ, ಕೋಶಾತಕಿ Nr.). see ಕಯ್ಪೀರೆ, ತುಪ್ಪಹೀರೆ. — ಹೀರೇ ಕಾಯಿ. the fruit of the Luffa (ಘೋಷಕ, ಧಾಮಾರ್ಗವ, ಮಹಾಜಾಲಿ G.). — ಹೀರೇ ಬಳ್ಳಿ. a climbing herb whose half grown fruit is a very good vegetable, Luffa acutangula Roxb. (C.).

**ಹೀಲ hīla.** N. of a plant (ಬಂಗರಳಿ Mr. 119). 2, semen virile.

**ಹೀಲಿ hīli.** = ಪೀಲಿ. a peacock's tail (ಪ್ರಚಲಾಕ, ಶಿಖಣ್ಡ Hlā.; Mr. 169; ಮಲ, ಪೀಲಿ Nn. 22, o. r. ಹಿಲ್ಲಿ); a feather of a peacock's tail (Bp. 18, 2); an eye in a peacock's tail. ನವಿಲ ಹೀಲಿಯ ಕಣ್ಣು (ಪೀಲಿ, ಚನ್ದ್ರ Nn. 69).

**ಹೀಹಾಳಿ hīhāḷi.** see s. ಹೀ 1.

**-ಹು hu. 1.** = -ಪು 1. an affix for formation of nouns. see *e. g.* ಕಡುಹು, ಕುಡುಹು, ತಗಹು, ತಿರುಹು 2, ಬಲುಹು.

**-ಹು hu. 2.** = -ಪು 2. an affix to form transitive verbs. see *e. g.* ಕೆಡಹು, ಕೊಡಹು, ತಡಹು 1, ತಿರುಹು 1, ಸಲಹು.

**ಹುಂ huṁ. ಹುವ್.** an imitative sound expressive of remembrance, *doubt, interrogation,* assent, anger, aversion, reproach, fear. *cf.* ಹೂಂ.

**ಹುಕುಂ hukuṁ.** a command, an order (My.; B. 5, 7; Mhr., H. ಹುಕೂಮು). — ಹುಕುಂ ನಾಮೆ. a written order (My.); a written award upon a suit settled; a decree (Mhr., H.).

**ಹುಕ್ಕಾ hukkā.** a smoking apparatus, a hooka (My.; Mhr., H.).

**ಹುಕ್ಕುಂ hukkuṁ.** = ಹುಕುಂ. (My.; Si. 399).

**ಹುಕ್ಕುಮು hukkumu.** = ಹುಕ್ಕುಂ. (My.; B. 5, 159. 269).

**ಹುಗಳು hugaḷu.** = ಹುಗುಳು, etc. (My.).

**ಹುಗಿ hugi.** = ಉಗಿ 7. to inter, to bury (C.; *cf.* ಪುದಿ 1, ಪೂಟ್). ಹುಗಿದಿಟ್ಟ ದ್ರವ್ಯ (ಉಪನಿಧಿ G.). ಸಿಕ್ಕ ಬದುಕು ತಕ್ಕೊಣ್ಡು ಹೋಗಿ, ಒನ್ದು ಹೊಲದೊಳಗೆ ಹುಗಿದಿಟ್ಟರು (B. 3, 41). ನರಿಗಳು ಹುಗಿದ ಹೆಣಗಳನ್ನು ಕೆದಱಿ ತೆಗೆದು ತಿನ್ನುವವು (3, 75). ಆತನ ಪ್ರೇತವನ್ನು ಬಹು ಸಮಾರಮ್ಭದಿನ್ದ ವಿಧಾನಪೂರ್ವಕವಾಗಿ ಹುಗಿದು (4, 215). ಅವರು ಅಂಜಿಕೊಣ್ಡು, ಹಣವನ್ನು ನೆಲದೊಳಗೆ ಹುಗಿದಿಡುವರು (5, 90).

**ಹುಗಿತ hugita.** = ಉಗಿತ. the act of burying or interring (My.).

**ಹುಗಿಲು hugilu.** to state of being rent or split (*cf.* ಉಗಿ 2). — ಹುಗಿಲುಗಳೆ. -ಕಳೆ. to split and remove (Bh. 1, 7, 3).

**ಹುಗಿಸು hugisu. 1.** = ಪುಗಿಸು, etc. to cause to enter (Bp. 43, 50; 45, 19).

**ಹುಗಿಸು hugisu. 2.** to cause to inter or bury (My.; B. 5, 55).

**ಹುಗು hugu.** = ಪುಗು 1, etc. to enter (Bp. 15, 10; 26, 53; 36, 52; 43, 40. 41. 44; 45, 27; 49, 8; 53, 48; 54, 8. 38; 57, 39; 58, 53; 60, 26; Bh. 3, 13, 26). P. p. ಹೊಕ್ಕು. ಕುಱಿ ಕಬ್ಬಿನೊಳು ಹೊಕ್ಕು (Sp.). ಉರಿ ಬನ್ದು ಬೇಲಿಯನು ಹರಿದು ಹೊಕ್ಕದ ಕಣ್ಡೆ (Sp.). ಹೊಕ್ಕನು ಕಾನನವನ್ ಅನಿಲಜನು (Bh. 3, 13, 24). (ಹೆಬ್ಬನ್ದಿ) ಭೀಮನ ಭೀತಿಯಲಿ ಹೊಕ್ಕುದು ಮಹಾಗಿರಿಗಹನಗಹ್ವರವ (3, 13, 31). ವನವೀಥಿಗಳ ವಳಯವ ಹೊಕ್ಕು ಮರಳಿದುದಿಲ್ಲ ವಿರಹಿಗಳು (1, 5, 10). (ಭೀಮನ್) ಅಸುರನ ಹೊಕ್ಕು, ತಿವಿದನು (1, 10, 38). — ಹುಗು ಹುಗು. rep. (Bp. 53, 48).

**ಹುಗುಳು huguḷu.** = ಪುಗುಳ್, ಹುಗಳು. a blister, a vesicle, a boil, a sore (ಪಿಟಕ, ಸ್ಫೋಟಕ, ಗಣ್ಡ Hlā.; ವಿಸ್ಫೋಟ, ಪಿಟಕ Nr.; ಹೋಳಿಗೆ Kk. 46; Bh. 1, 6, 14; My.). ಕಾಲ ಹುಗುಳು (ಪಾದಸ್ಫೋಟ, ವಿಪಾದಿಕೆ Nr.). — ಹುಗುಳೇೞು. -ಏೞು. blisters or sores to arise (Bp. 13, 20. 21. 22. 24).

**ಹುಗ್ಗಿ huggi.** = ಪುಗ್ಗಿ q. v., etc. a rice dish. (Bp. 2, 53; 14, 13; 15, 25; 33, 17. 18; Bp. 38, 2; ಉಷ್ಣಿಕೆ, ಪಾಯಸ, ಯವಾಗು, ಶ್ರಾಣೆ G.; C.). ಯವೆಯ ಹುಗ್ಗಿ, a hodge-podge of barley (ಚಿಕ್ಕಸ Nr.). ಹುಗ್ಗಿ ತಿನ್ದಾಕ್ಷಣ ಮುಗ್ಗಿ ಬನ್ದ ಹಾಗಾಯಿತೇ? (Prv.). — ಹುಗ್ಗಿಯ ದುಗ್ಗಳವ್ವೆ. N. (Bp. 59, 6).

**ಹುಗ್ಗಿಗ huggiga.** a proud, arrogant man (Bh. 3, 9, 36 4, 9, 59; see ಪುಗ್ಗು).

**ಹುಗ್ಗೆ hugge.** = ಹುಗ್ಗಿ. a dish made of rice, pulse, etc. ಎಳ್ಳ ಹುಗ್ಗ (ತಿಲೌದನ Nr.).

**ಹುಂಕಾರ huṅ-kāra.** uttering a menacing sound; any roaring, bellowing. (J. 13, 36).

**ಹುಚ್ಚಂಗಿ huccaṅgi.** = ಉಚ್ಚಂಗಿ. a village in Mysore. (My.). — ಹುಚ್ಚಂಗಮ್ಮ. -ಅಮ್ಮ. = ಹುಚ್ಚಂಗಿದುರ್ಗಿ. (My.). — ಹುಚ್ಚಂಗಿದುರ್ಗಿ. N. of a Durgi at Huccaṅgi (My.).

**ಹುಚ್ಚತನ huccatana.** = ಹುಚ್ಚುತನ. madness (ಮರುಳ್ತನ G.).

**ಹುಚ್ಚಿ hucci.** = ಪೆಚ್ಚಿ, etc. a stupid or mad female (My.); N. (My.). ಹುಚ್ಚಿಗೆ ಅತ್ತೇ ಮನೆ ಏನು? ತವರ ಮನೆ ಏನು? (Prv.).

**ಹುಚ್ಚು huccu.** = ಪೆಚ್ಚು q. v., etc. foolishness, folly, madness (ಉನ್ಮಾದ, ಚಿತ್ತವಿಭ್ರಮ Si. 70; B. 4, 133; C.); the state of growing wild, as plants; excess. ಹುಚ್ಚು ಹೋಯಿತು, ಒನಕೆ ತಾ! ಅನ್ನ. — ಹುಚ್ಚಲ್ಲ, ಬೆಪ್ಪಲ್ಲ, ಶಿವಲೀಲೆ. — ಹುಚ್ಚು ಹೋಗದೆ ಮದಿವೆ ಆಗದು, ಮದಿವೆ ಆಗದೆ ಹುಚ್ಚು ಹೋಗದು. — ಮುಚ್ಚಿ ಇಟ್ಟರೆ ಹುಚ್ಚು ಹೋದೀತೇ? — ಹಚ್ಚಡ ಹೊದಿಸಿದರೆ ಹುಚ್ಚು ಹೋದೀತೇ? — ಬಿಚ್ಚಿ ಹೇಳಿದರೂ ಹುಚ್ಚು ಹೋಗದು (Prvs.). — ಹುಚ್ಚ. -ಅ 3. a stupid or mad man (C.; ಉನ್ಮತ್ತ G.); N. (C.). ಹೀಗೆ ಹುಚ್ಚನನ್ತೆ ತಿರುಗಾಡುವದು ತರವಲ್ಲ (B. 3, 125). ಇವನು ಎಲ್ಲಿಯೋ ಹುಚ್ಚ ಕಾಣಿಸುತ್ತಾನೆ (4, 53). ದುಃಖದಿನ್ದ ಅವನು ಹುಚ್ಚನಾಗಿ (5, 73). ಹುಚ್ಚ ಹೋದದ್ದೇ ದಾರಿ. — ಹುಚ್ಚಗೆ ನಚ್ಚ ಬಾರದು, ಪಚ್ಚಕ್ಕೆ ಕೊಡತೆ ಬಾರದು. — ಎಲ್ಲರೂ ನಕ್ಕರೆ ಹುಚ್ಚ ತಾನೂ ನಕ್ಕ. — ನುಚ್ಚಾದರೂ ಹುಚ್ಚಗೆ ಬೇಕು (Prvs.). — ಹುಚ್ಚರಾಯ. Hanumat (My.); N. ಕೆಟ್ಟು ಮುಱಿದವರೆಲ್ಲಾ ಹುಚ್ಚರಾಯನ ಗುಡೀ ಸೇರಿ! (Prv.). — ಹುಚ್ಚಾಟ. -ಆಟ. foolish behaviour, silly conduct (C.; B. 3, 72). — ಹುಚ್ಚುಕಗ್ಗಲಿ (ಅರಿಮೇದ, ವಿಟ್ಖದಿರ Si. 134). — ಹುಚ್ಚುಕಬ್ಬು. = ಕಾಕಬ್ಬು. (My.). — ಹುಚ್ಚುಕುಱಿಮಱಿ. a foolish lamb (B. 2, 45). — ಹುಚ್ಚುಕೆಲಸ. a foolish business or work (My.). — ಹುಚ್ಚುಕೋಪ. excessive anger (My.). — ಹುಚ್ಚುಗಾಳಿ. a violent wind (My.). — ಹುಚ್ಚುಗೊಳ್. -ಕೊಳ್. to become mad or bewildered (Abhā. 2, 89). — ಹುಚ್ಚುತರ್ಕನ ಕಸ. the herb Heliotropum supinum Lin. var- malabarica (Z.). see ಬಿಳೇ-. — ಹುಚ್ಚು ತಿಳಿ. madness to cease (My.). — ಹುಚ್ಚುತಿಳುವಿಕೆ. foolish notions (My.; B. 5, 190). — ಹುಚ್ಚುತೊಣ್ಡೆ. (ಕಾಕಾಂಗಿ, ಕಾಕನಾಸಿಕೆ G.). — ಹುಚ್ಚುನಾಯಿ. a mad dog (C.; B. 2, 53). — ಹುಚ್ಚುಪಡವಲ. (ಕುಲಕ, ಪಟೋಲ, ತಿಕ್ತಕ, ಪಟು Si. 161). — ಹುಚ್ಚು ಪುಚ್ಚು. reit. (My.). — ಹುಚ್ಚುಪ್ರೀತಿ. excessive love, silly affection (My.). — ಹುಚ್ಚು ಬಿಡಿಸು. to remove folly, etc. (B. 4, 57). — ಹುಚ್ಚುಬುದ್ಧಿ. a foolish mind; unreasonableness (My.). — ಹುಚ್ಚುಬೇವುಮರ. = ತುರಕಬೇವುಮರ. (St. & Pl.). — ಹುಚ್ಚುಮಱಿ. a foolish young (B. 2, 45). — ಹುಚ್ಚುಮಟೆ. excessive, heavy rain (My.). — ಹುಚ್ಚು ಮಾಡು. to make a fool of (another, My.). — ಹುಚ್ಚುಮುಣ್ಡೆ. a foolish widow. ಹುಚ್ಚುಮುಣ್ಡೇ ಪ್ರಮಾಣ ಅವಲಕ್ಕೀ ಕೇಡು (Prv.). — ಹುಚ್ಚುಸಪ್ಪು. the wild kind of the sword-bean, Canavalia ensiformis var- virosa W. & A. (Z.). — ಹುಚ್ಚುಸಾಸುವೆ. (ಕ್ಷವ, ಕ್ಷವಥಾಭಿಜನನ, ರಾಜಿಕೆ, ಕೃಷ್ಣಿಕೆ, ಆಸುರಿ Si. 305). — ಹುಚ್ಚು ಹತ್ತು. foolishness or madness to join (v. i.) or to seize (My. with dative; B. 2, 53). — ಅವನಿಗೆ ಹುಚ್ಚು ಹತ್ತಿತು (B. 5, 209). — ಹುಚ್ಚುಹರಳು. (ವಿಶಲ್ಯೆ Si. 446). — ಹುಚ್ಚುಹಾರುವ. a foolish Brāhmaṇa (B. 4, 180). — ಹುಚ್ಚು ಹಿಡಿ. foolishness or madness to seize (My. with dative; Dp. 20 pallavi). ನಿಮಗೆ ಹುಚ್ಚು ಹಿಡಿಯಿತೇನು? (B. 5, 94). ಹುಚ್ಚು ಹಿಡಿದವನು (ಉನ್ಮತ್ತ, ಉನ್ಮಾದವತ್ Si. 203); ಔಷಧಪ್ರಯೋಗದಿನ್ದ ಹುಚ್ಚು ಹಿಡಿದ ನಾಯಿ (ಅಲರ್ಕ 342). — ಹುಚ್ಚುಹುಚ್ಚು. rep. great excess (My.). — ಹುಚ್ಚೆಳ್ಳು. -ಎಳ್ಳು. = ಕಾಡೆಳ್ಳು. (St. & Pl.; ತಿಲಪಿಂಜ, ತಿಲಪೇಜ, ನಿಷ್ಫಲತಿಲ Si. 305). — ಹುಚ್ಚೇಱು. -ಏಱು. madness to increase (My.). — ಹುಚ್ಚೋಟ. -ಓಟ. a very fast run (My.).

**ಹುಚ್ಚುತನ huccutana.** = ಪೆಚ್ಚುತನ, ಹುಚ್ಚತನ. madness; foolishness (My.; B. 5, 209).

**ಹುಜತ್ತು hujattu.** perverse wrangling, objecting; any such objection or difficulty made; any mean, unfounded, unreasonable pretence in endeavouring to shuffle off or decline (My.; Mhr., H. ಹುಜತ). 2, a government receipt (Mhr., H.).

**ಹುಜೂರ್ hujūr.** ಹುಜೂರು. = ಹಜೂರು, royal presence, etc. (B. 4, 20; My.).

**ಹುಂಜ huñja.** = ಉಂಜ, ಪುಂಜ, etc. a cock (My.; ಚರಣಾಯುಧ G.).

**ಹುಂಜ huñja.** = ಉಂಜ, ಪಿಂಜಿ. a quantity or skein of cotton yarn (My.; Te., T. ಪುಂಜ).

**ಹುಂಜು huñju.** = ಹುಂಜ, etc. (My.). ಕೋೞಿ ಹುಂಜು (ಪದಾಯುಧ G.). — ಹುಂಜುದಡಿ. a kind of border of a cloth (B. 3, 103). — ಹುಂಜು ಹತ್ತು. = ಹುಂಜು ಹಾಱು. (My.). — ಹುಂಜು ಹಾಱು. a cock to tread (a hen, My.).

**ಹುಟ್ಟ huṭṭa. 1.** = ಹುಟ್ಟು, etc. birth, etc. see ಜೇನ-.

**ಹುಟ್ಟ huṭṭa. 2.** = ಹುಟ್ಟು 2, etc. — ಹುಟ್ಟಗಿವಡಿ. -ಕಿವಡಿ. = ಹುಟ್ಟುಕಿವುಡಿ. (B. 3, 50). — ಹುಟ್ಟಗುರಡ. -ಕುರಡ. = ಹುಟ್ಟುಕುರುಡ. (ಜಾತ್ಯನ್ಧG.). — ಹುಟ್ಟನಡಿಗೆ. the natural paces of a horse (B. 3, 55). — ಹುಟ್ಟಾ. from one's very birth (B. 4, 153).

**ಹುಟ್ಟಾವಳಿ huṭṭāvaḷi.** = ಹುಟ್ಟುವಳಿ. produce, etc. (B. 5, 116. 127).

**ಹುಟ್ಟಿ huṭṭi.** = ಉಟ್ಟಿ 3, ಪುಟ್ಟ 3, ಹುಟ್ಟ 1, ಹುಟ್ಟು 4. a comb (of wax in which bees store their honey, Bh. 7, 7, 41; My.; see ಜೇನ-). (ದೇವರು) ಕೊಟ್ಟು ಬಹ ಕಾಲದಲಿ ಕೊಟ್ಟುವುಣ್ಣಲಱಿಯದೆ (ನೊಣ) ಹುಟ್ಟಿಯ ಒಳಗೆ ಜೇನಿಟ್ಟು ಪರರಿಂಗೆ ಕೊಟ್ಟು ಹೋದನ್ತೆ (Sp.).

**ಹುಟ್ಟಿಗೆ huṭṭige.** (fr. ಉಡು 1). = ಹುಟ್ಟುಗೆ. a man's raiment (Bp. 11, 33), a woman's cloth (ಸೀರೆ Śm. 72; Bp. 11, 33; ದುಗುಲ, ಪಟ್ಟಣಿಗೆ, ಉಳ್ಳುಡಿಗೆ, ವಸನ Ss.). ಉಡುವ ಹುಟ್ಟಿಗೆ (ಸ್ಥೂಲಶಾಟಕ Nr.). ಹುಲ್ಲುಂ (o. r. ಹಲ್ಲುಂ) ಹುಟ್ಟಿಗೆಯುಂ (Śmd. 84).

**ಹುಟ್ಟಿಸು huṭṭisu.** = ಪುಟ್ಟಿಸು. to cause to be born, to create, to produce, to originate (Bp. 40, 51; 50, 64; 54, 6; C.; B. 3, 54; 4, 35; 5, 80). ಗಣ್ಡನು ಸತ್ತ ಮೇಲೆ ಮಿಣ್ಡನ ದೆಸೆಯಿನ್ದ ಹುಟ್ಟಿಸಿಕೊಣ್ಡ ಹಾದರದ ಮಗನು (ಗೋಲಕ Si. 193); ಕಡೆದು ಒರೆಗೊಣ್ಡು ಅಗ್ನಿಯಂ ಹುಟ್ಟಿಸುವ ಮರ (ಅರಣಿ 239); ಯಾವನು ಬ್ರಾಹ್ಮಣಸ್ತ್ರೀಯಲ್ಲಿ ಶೂದ್ರನಿನ್ದ ಹುಟ್ಟಿಸಲ್ ಪಟ್ಟನೋ, ಅವನು (ಚಣ್ಡಾಲ 337); ಇತರರನ್ನು ಸ್ವಾಧೀನಪಡಿಸಿಕೊಳ್ಳಲು ಆಶೆ ಹುಟ್ಟಿಸುವದಕ್ಕಾಗಿ ಕೊಡುವಿಕೆ (ವಿಲಮ್ಬ, etc. 397).

**ಹುಟ್ಟಿಸುಹ huṭṭisuha.** creating, etc. ಹಗೆಯರಿಬ್ಬರೊಳಗೆ ವಿರೋಧವ ಹುಟ್ಟಿಸುಹ (ಭೇದ Nr.).

**ಹುಟ್ಟು huṭṭu. 1.** = ಉಟ್ಟು 5, ಪುಟ್ಟು 1 q. v. to arise, to come into existence, to be born, etc. (ಅವತರಿಸು Śmd. 66 Cm.; ಉದಯಿಸು 84 Cm.; Bp. 27, 16; 30, 28; 42, 5; 61, 37; Bh. 3, 8, 3; J. 10, 20; Dp. 4; C.; B. 2, 7; 4, 28). ಒಡ ಹುಟ್ಟಿದವನು (ಸೋದರ್ಯ, ಸಹಜ, etc.); ಆಗಳನ್ತೆ ಹುಟ್ಟಿದ ಕೞು (ತರ್ಣಕ); ಬೆಟ್ಟದಲ್ಲಿ ಹುಟ್ಟಿದನ್ಥಾ ಆ ಒಗನಿ (ಅಕ್ಷೋಟ, etc.); ಕಣಿಯಲ್ಲಿ ಹುಟ್ಟಿ ಚೂರ್ಣಾದಿರೂಪವಾಗಿ ಇಹುದು (ಅಕೃತ); ಬಿತ್ತಿ ಹುಟ್ಟಿದ ಕೆಯಿ (ವೀಜಾಕೃತ, etc.); ಗುಬ್ಬಿಗೆ ಹುಟ್ಟಿದ ಗಣ್ಡುಮಱಿ (ಚಾಟಕೈರ); ಕೆಚ್ಚನೆ ಅಪ್ಪಬನ್ದಾಗೆ (ಹಲ್ಲಕ, etc.), ಅದು ಜಲದೊಳಾದಡೂ ಸ್ಥಲದೊಳಾದಡೂ ಹುಟ್ಟುವುದು (Nr.). ಹುಟ್ಟುವಾಗ ಬತ್ತಲೆ, ಸಾಯುವಾಗ ಕತ್ತಲೆ. — ಹುಟ್ಟುತ್ತಲೆ ನನ್ನ ಮಗ, ಉಡಿಗೆಜ್ಜೆ ಕದ್ದ. — ಹುಟ್ಟಿಲ್ಲ, ಸತ್ತಿಲ್ಲ, ಸುಡುಗಾಡು ಕಣ್ಡಿಲ್ಲ; ದುಕ್ಕ ಹ್ಯಾಗೆ ತಿಳಿದೀತು? — ಹುಟ್ಟಿದ್ದು ಹೊಲೆಯೂರು, ಬೆಳೆ

ದದ್ದು ನೊಲೆಯೂರು, ಇದ್ದದ್ದು ಈ ಊರು, ಎದ್ದದ್ದು ಕಾಡೂರು. — ಹುಟ್ಟಿದಾಗ ಅಣ್ಣ ತಮ್ಮ, ಬೆಳೆದಾಗ ದಾಯಾದಿ. — ಪುಣ್ಯ ಮಾಡದೆ ಕೆಟ್ಟೆ, ಹೆಣ್ಣು ಹುಟ್ಟಿ ಕೆಟ್ಟೆ (Prvs.). ಹುಟ್ಟುವದು (ಪ್ರಸೂನ, ಉತ್ಪತ್ತಿ Nn. 25; ಸೂತ, ಸಮ್ಭವ 32; ಉದ್ಭವ 82; ಭವ Bhn. 17). ಹುಟ್ಟುವನ್ಥಾದು (ಭೂತ, ಜನಿತ Nn. 78; ಭಾವ, ಸಮುದ್ಭೂತ 100).

**ಹುಟ್ಟು huṭṭu. 2.** = ಪುಟ್ಟು2 q. v., ಹುಟ್ಟ2. birth, etc. (ಉತ್ಪತ್ತಿ, ಜನ್ಮG.; My.). ಹುಟ್ಟು ಕಿತ್ತರೂ ಹುಟ್ಟು ಬಿಡ (Prv.). ಸಾವು ಹುಟ್ಟುಗಳು (Bp. 54, 21). ಹುಟ್ಟುಗಳು (54, 34). see ಕಡೆ-. — ಹುಟ್ಟಿಋ. -ಅಟಋ. = ಹುಟ್ಟುಗೆಡು. (My.). — ಹುಟ್ಟುಕಿವುಡ. a male born deaf (My.). — ಹುಟ್ಟುಕಿವುಡಿ. a female born deaf (My.). — ಹುಟ್ಟುಕುರುಡ. a male born blind (My.). ಹುಟ್ಟು ಕುರುಡಗೆ ಸ್ವಪ್ನವಿಲ್ಲ, ಮಟ್ಟು ತಿಳಿದವಗೆ ರೋಗವಿಲ್ಲ. — ಹುಟ್ಟುಕುರುಡ ಹಾಲು ತಿಳುಕೊಣ್ಡ ಹಾಗೆ. — ಹುಟ್ಟುಕುರುಡ ಹಾಋಬಾವೀಲಿ ಬಿದ್ದ ಹಾಗೆ (Prvs.). — ಹುಟ್ಟುಕುರುಡಿ. a female born blind (My.). — ಹುಟ್ಟುಗುಣ. a natural or innate disposition. ಹುಟ್ಟುಗುಣ ಬಿಟ್ಟು, ಕೊಟ್ಟ ಗುಣ ಬನ್ದೀತೇ? ಹುಟ್ಟುಗುಣ ಗಟ್ಟ ಹತ್ತಿದರೂ ಹೋಗ (Prv.). — ಹುಟ್ಟುಗುರುಡ. -ಕುರುಡ. = ಹುಟ್ಟು ಕುರುಡ. (Bp. 47, 65). — ಹುಟ್ಟುಗೆಡು. -ಕೆಡು. birth, *i. e.* race or family, to be destroyed (Bp. 31, 22). — ಹುಟ್ಟುಚಾಳಿ. a natural habit. ಹುಟ್ಟುಚಾಳಿ ಗಟ್ಟ ಹತ್ತಿದರೂ ಬಿಡದು (Prv.). — ಹುಟ್ಟು ಬಂಜೆ. a woman born barren (Dp. 84; My.). — ಹುಟ್ಟುಬುದ್ಧಿ. natural perception or ideas, natural propensity, instinct (My.; B. 4, 119). ಹುಟ್ಟುಬುದ್ಧಿ ಸುಟ್ಟಲ್ಲದೇ ಹೋಗದು (Prv.). — ಹುಟ್ಟು ಮಚ್ಚೆ. a natural mole or freckle (ಜಟುಲ, ಕಾಲಕ, ಪಿಪ್ಲು, ತಿಲಕ, ತಿಲ ಕಾಲಕ Si. 199). — ಹುಟ್ಟುಮನೆ. the house in which one has been born. ಹುಟ್ಟುಮನೆ ಏಕಾದಶಿ (on which strict fasting is observed), ಕೊಟ್ಟ ಮನೆ ಗೋಕುಲಾಷ್ಟಮಿ (on which during the night only a slight repast is taken, Prv.). — ಹುಟ್ಟೂರು. -ಊರು. a native place, birth-place (My.).

**ಹುಟ್ಟು huṭṭu. 3.** = ಉಟ್ಟು2, ಪುಟ್ಟು3. a wooden ladle or spoon; a paddle (ಖಜಿಕೆ, ದರ್ವಿ, etc. Mr. 205; ಪಾಣಿದಣ್ಡ, ಗಟಿ 416; My.; B. 5, 149. 156). ನಾವೆಯ ನಡಯಿಸುವ ಹುಟ್ಟು (ಅರಿತ್ರ, ಕೇನಿಪಾತಕ Nr.). ಹಡಗವನ್ನು ನಡೆಸುವ ಹುಟ್ಟು (ನೌಕಾದಣ್ಡ); ಹಡಗು ಸಾಗಿಸುವ ಹುಟ್ಟು (ಕ್ಷೇಪಣಿ G.). ಹುಟ್ಟು ಇರುವಾಗ ಕೈಯ್ ಸುಟ್ಟುಕೊಳ್ಳಬೇಕೇ? — ಹುಟ್ಟು ಕೋಲುಕಾಋನದು, ಕಟ್ಟು ಸಾವಕಾಋನದು (Prvs.). ಅಟ್ಟಡಿಗೆಯ ರುಚಿಯನು ಹುಟ್ಟು ತಾ ಬಲ್ಲುದೇ? (Sp.). — ಹುಟ್ಟು ಹಾಕು. to use a paddle (with a boat, My.).

**ಹುಟ್ಟು huṭṭu. 4.** = ಹುಟ್ಟ, etc. see ಜೇನ-.

**ಹುಟ್ಟುಗೆ huṭṭuge.** = ಹುಟ್ಟಗೆ. a cloth, etc. (ಸೀರೆ Ct. II, 78).

**ಹುಟ್ಟುವಳಿ huṭṭu-vaḷi.** = ಹುಟ್ಟಾವಳಿ. produce, the produce of a garden or field, that of any trade; the amount of an assessment (My.; B. 5, 85. 91. 304). ಲಾಭದ ಹುಟ್ಟುವಳಿ (ಪ್ರಾಪ್ತಿ Si. 424).

**ಹುಟ್ಟುವಿಕೆ huṭṭuvike.** = ಹುಟ್ಟುಹ. (ಜನುಸ್, ಜನನ, ಜನ್ಮ, ಜನಿ, ಉತ್ಪತ್ತಿ, ಉದ್ಭವ Si. 47; ಅಭ್ಯುದಯ Cb.; B. 2, 22). ಮಕ್ಕಳು ಹುಟ್ಟುವಿಕೆ (ಪ್ರಜೆ Si. 413).

**ಹುಟ್ಟುಹ huṭṭuha.** = ಪುಟ್ಟುಹ. coming into existence, springing up, being born, etc. ಮರಳಿ ಮರಳಿ ಹುಟ್ಟುಹ (ಪುನರ್ಭವ Nn. 114).

**ಹುಡಕು hudaku.** = ಹುಡುಕು, etc. (My.; B. 5, 105; Mhr. ಹುಡಕಣೇಂ, to search). ಹುಡಕೋಣ (ಮೃಗ, ಮಾರ್ಗಣ Cb.).

**ಹುಡಗ hudaga.** = ಹುಡುಗ, etc. a boy. (My.; Si. 196; ತರುಣ Cb.).

**ಹುಡಗತನ hudagatana.** = ಹುಡುಗತನ. boyhood (My.; Si. 195).

**ಹುಡಗಿ hudagi.** = ಹುಡುಗಿ, etc. (My.). a girl. ಸಣ್ಣ ಹುಡಗಿ (ಬಾಲೆ, etc. Dhw.).

**ಹುಡದಿ huḍadi.** a game at which boys push, shove and beat one another (often played in moonshine, S. Mhr.; Mhr. ಹುನ್ದಡಾ, ಹುನ್ದಡೀ, ಹುತುತು).

**ಹುಡಿ huḍi.** = ಪುಡಿ. powder; dust; etc. (C.; B. 1, 18). ಹೂವಿನೊಳಗಿನ ಹಳದೀ ಬಣ್ಣದ ಹುಡಿ (ಬಣ್ಡು); ಹೂವಿನೊಳಗಿನ ಹುಡಿ (ಸುಮನೋರಜ G.). ಸಣ್ಣ ಹುಡಿ (ಧೂಳಿ, etc. Mr. 284). ಅಡವಿಯೊಳು ಮುಟ್ಟಿ ಹೊಡದು ಗಿಡ ಸೇದುಗೊಣ್ಡನ್ದು, ಹುಡಿಯೊಳಗೆ ಕಮಲ ಬೆಳೆದನ್ದು ಹೆಣ್ಣಿನ ನುಡಿಯ ನೆಚ್ಚು! (Sp.). — ಹುಡಿಗುಟ್ಟು. -ಕುಟ್ಟು. = ಪುಡಿಗುಟ್ಟು. to reduce to powder or dust by beating, etc. (Grj. 1, 106 va.; Bp. 51, 72; Bh. 8, 24, 45). ಹುಡಿಗುಟ್ಟಿದ ದೂಳಿ (ಚೂರ್ಣ, ಕ್ಷೋದ Nr.). — ಹುಡಿಮಣ್ಣು. earth in a dry and fine state, dust (My.). — ಹುಡಿ ಮಾಡಿಸು. to have reduced to dust (Bp. 49, 42). — ಹುಡಿ ಮಾಡು. to reduce to powder or dust (Bh. 7, 7, 46; My.). — ಹುಡಿಯಾಗು. -ಆಗು. to be reduced to powder or dust (Bp. 23, 25). — ಹುಡಿ ಹುಡಿಗೆಯ್. = ಹುಡಿ ಹುಡಿ ಮಾಡು. (J. 25, 47). — ಹುಡಿ ಹುಡಿ ಮಾಡು. to reduce to very fine powder or dust (Bp. 45, 31; 52, 48; Bh. 2, 4, 6). — ಹುಡಿ ಹುಡಿಯಾಗು. -ಆಗು. to be reduced to very fine powder or dust (Bh. 3, 18, 38).

**ಹುಡಿಕು huḍiku.** = ಹುಡುಕು, etc. (Bp. 23, 9; B. 5, 140). ಹುಡಿಕಿ ನೋಡುವಿಕೆ (ಅನ್ವೀಕ್ಷಣ, ವಿಚಯನ, ಮಾರ್ಗಣ, ಮೃಗಣ, ಮೃಗ Si. 398), ಹಿಡಿಯುವದು ಹೆಬ್ಬಾವು, ಹಡೆಯುವದು ಪಡಿಬತ್ತ; ಹುಡಿಕಿ ನೋಡುವದು ಪರಬೊಮ್ಮ, ಜೋಯಿಸಗೆ ಕೊಡುವದೊನ್ದಡಿಕೆ (Sp.). — ಹುಡಿಕಿ ತೆಗೆ. = ಹುಡುಕಿ ತೆಗೆ. (B. 5, 173. 174. 227).

**ಹುಡಿಗಿ huḍigi.** = ಹುಡುಗಿ, etc. (C.; B. 1, 6). ಚಿಕ್ಕ ಹುಡಿಗಿ (ವಾಸು, ಬಾಲೆ Si. 65); ಮದುವೆಯಿಲ್ಲದ ಎಣ್ಟು ವರುಷಗಳ ಹುಡಿಗಿ (ಕನ್ಯೆ, ಕುಮಾರಿ); ಮೆಯ್ ನೆಱೆಯದೇ ಇರುವ ಪ್ರಾಯದ ಹುಡಿಗಿ (ಗೌರಿ); ಹೊಸದಾಗಿ ಮೆಯ್ ನೆಱೆದ ಹುಡಿಗಿ (ಮಧ್ಯಮೆ, etc. 184); ಪ್ರಾಯದ ಹುಡಿಗಿಯರ ಗುಮ್ಪು (ಯೌವತ); ಮದುವೆಯಾಗದೆ ಹುಡಿಗಿಯಾಗಿರುವವಳು ಹೆತ್ತ ಮಗನು (ಕಾನೀನ 189); ಹೆಣ್ಣುಹುಡಿಗಿ (ಬಾಲೆ); ಪ್ರಾಯದ ಹುಡಿಗಿ (ತರುಣಿ 196).

**ಹುಡಿಗೆ huḍige.** = ಹುಡುಗಿ, etc. (B. 2, 14).

**ಹುಡು huḍu.** seeking (? see ಹುಡುಕುಳಿ).

**ಹುಡು huḍu.** *a ram.*

**ಹುಡುಕಿಸು huḍukisu.** to cause to seek (as a lost book, etc., My.). 2, to cause to search or examine (B. 4, 169).

**ಹುಡುಕು huḍuku.** = ಪುಡುಕು, ಹುಡಕು, ಹುಡಿಕು. to search or feel for with the hands (Bp. 50, 3; 51, 78); to go in search of, to seek, to seek for, to search for, to try to find (My.). 2, to search, to examine (see ಹುಡುಕಿಸು No. 2). ಇಱುವೆಗಳು ಯಾವಾಗಲೂ ಆಹಾರ ಹುಡುಕುತ್ತಿರುತ್ತವೆ (B. 2, 8). ದೋಷವನ್ನೇ ಹುಡುಕುವವನು (ದೋಷೈಕದೃಶ್, ಪುರೋಭಾಗಿ Si. 366); ಹುಡುಕಲ್ ಪಟ್ಟಿರುವದು (ಅನ್ವೇಷಿತ, ಗವೇಷಿತ, ಅನ್ವಿಷ್ಟ, ಮಾರ್ಗಿತ, ಮೃಗಿತ 383). — ಹುಡುಕಿ ತೆಗೆ. = ಹುಡಿಕಿ ತೆಗೆ. to seek and (after finding) to take (My.); to find (in arithmetic, My.); to discover (B. 4, 220. 222; 5, 177. 179. 181. 184. 189. 220. 224). ಅರ್ಥವನ್ನು ಹುಡುಕಿ ತೆಗೆಯೋಣ (ಸಾಧನ G.).

**ಹುಡುಕುವಿಕೆ huḍukuvike.** seeking (ಮೃಗ Si. 409). ವಿಷಯ ಪ್ರಕಾರಗಳನ್ನು ಪರಿಭಾವಿಸಿ ಬೇಕಾದ ಬಗೆಗಳನ್ನು ಹುಡುಕುವಿಕೆ (ಉಪಾ

ಹೆಗ್ಗೊಮ್ಬು (ಸ್ಕನ್ಧಶಾಖೆ, ಶಾಲೆ Hlā.; Mr. 105). ಹೆಗ್ಗೊಮ್ಬಾದರೂ ನುಗ್ಗೇ ಮರದ್ದಾಗದು (Prv.). — ಹೆಗ್ಗೊಮ್ಬೆ. -ಕೊಮ್ಬೆ. = ಹೆಗ್ಗೊಮ್ಬು. (My.). — ಹೆಗ್ಗೊಳ್ಳಿ. -ಕೊಳ್ಳಿ. a large fire-brand (Rām. 5, 8, 54). — ಹೆಗ್ಗೋರಟೆ. Globe amaranth, Gomphrena globosa Lin. (ಅಮ್ಲಾನ, ಮಹಾಸಹೆ Nr.). — ಹೆಗ್ಗೋರಣ್ಟೆ. (ಕುರವಕ Si. 139).

**ಹೆಗ್- heg. 2.** = ಹೆಕ್-, etc. — ಹೆಗ್ಗತ್ತು. -ಕತ್ತು. the back or nape of the neck (ಅವಟು, ಘಾಟೆ, ಕೃಕಾಟಿಕೆ Si. 213; ವಹ 319).

**ಹೆಗಲ್ hegal.** = ಪೆಗಲ್, etc. the shoulder (Bp. 44, 7. 13; 47, 41; 50, 1. 13; Tu. ಪುಗೆಲ್, ಪುಗ್ಗೆಲ್); the shoulder or neck of an ox (ಸ್ಕನ್ಧದೇಶ, ವಹ Hlā.); the withers of an elephant (ಸ್ಕನ್ಧ, ಆಸನ Hlā.). ಗಜದ ಹೆಗಲ್ (ಸ್ಕನ್ಧ, ಆಸನ Mr. 154). — ಹೆಗಲ ವಿಟ್ಟಣ್ಣ. N. (Bp. 56, 41). — ಹೆಗಲ್ಗೊಳಿಸು. -ಕೊಳಿಸು. to join the neck (of an ox) to, to yoke (an ox, Bp. 56, 6).

**ಹೆಗಲು hegalu.** = ಹೆಗಲ್, etc. (ಸ್ಕನ್ಧ, ಭುಜಶಿರಸ್, ಅಂಸ Si. 209; Rām. 3, 6, 5; C.; B. 3, 127). ಜೀವಧನವಿನ ಹೆಗಲು (ಸ್ಕನ್ಧಪ್ರದೇಶ, ವಹ Nr.). ಹೆಗಲಿಂಗೆ (Bp. 57, 33). — ಹೆಗಲಾಗು. -ಆಗು. the neck of oxen to swell (My.). — ಹೆಗಲುಬಡಿಕ. a shoulder-beater: a ruthless man (Rām. 4, 3, 3).

**ಹೆಗ್ಗಣ heggaṇa.** a bandicoot. see s. ಹೆಗ್ 1.

**ಹೆಗ್ಗಳ heggaḷa.** = ಎಗ್ಗಳ, etc. abundance. (*cf.* ಹೆಕ್ಕಳ). ಹೆಗ್ಗಳದ ಭಾಗ್ಯವು ಗಟಿಗೇಲಿ ಹೋಗುವಾಗ (Dp. 38, 2).

**ಹೆಗ್ಗು heggu.** = ಎಗ್ಗು 2, etc. (My.). shame, etc.

**ಹೆಂ- hen.** = ಪೆಂ-(ಪೆಣ್)-, etc. a female; a woman. — ಹೆಂಗಳ್. women (J. 3, 11; 30, 4. 5). — ಹೆಂಗಳು. = ಹೆಂಗಳ್. (Si. 109. 208. 410. 418. 422). — ಹೆಂಗಳ್ಳ. -ಕಳ್ಳ. a robber of females (Rām. 6, 47, 22). — ಹೆಂಗೂಸು. -ಕೂಸು. = ಪೆಂಗೂಸು, etc. a woman (ಭಾಮಿನಿ, ಅಂಗನೆ, ಸ್ತ್ರೀ, etc. Mr. 301, o. r. ಹೆಂಗುಸು; Bp. 20, 20). — ಹೆಂಗೊಲೆ. -ಕೊಲೆ. murder of women (J. 16, 15).

**ಹೆಂಗಸು hengasu.** (abbreviation of ಹೆಂಗೂಸು). a female; a woman (ವಧು, ಸ್ತ್ರೀ Si. 433; ವನಿತೆ 426; C.). ತಮ್ಮಾ, ಆ ಹೆಂಗಸು ತಲೆಯ ಮೇಲೆ ಏನು ಹೊತ್ತುಕೊಣ್ಡು ಬರುತ್ತಾಳೆ? (B. 1, 1). ಅಟುವ ಹೆಂಗಸನ್ನೂ ನಗುವ ಗಣ್ಡಸನ್ನೂ ನಮ್ಬಬಾರದು. — ಗಣ್ಡಸು ಕೂತು ಕೆಟ್ಟನು, ಹೆಂಗಸು ತಿರಿಗಿ ಕೆಟ್ಟಳು (Prvs.). 2, a wife (in certain clear cases, C.). ವಿದ್ಯೆ ಕಲಿತ ಹೆಂಗಸು ತನ್ನ ಗಣ್ಡನನ್ನೂ ಮಕ್ಕಳನ್ನೂ ಯಾವಾಗಲೂ ಸನ್ತೋಷಪಡಿಸುವಳು (B. 3, 32). ಈಟಿಲ್ಲದವನಿಗೆ ಮಿಾಟಾದ ಹೆಂಗಸು (Prv.). plural ಹೆಂಗಸರು (C.; B. 4, 165; 5, 140. 283). ಹೆಂಗಸರ ತಳ್ಳಿ ಕಾಲಿಗೆ ಬಿದ್ದ ಬಳ್ಳಿ. — ಹೆಂಗಸರ ಬಾಯಿಯಲ್ಲಿ ಮಾತು ನಿಲ್ಲದು, ಗಣ್ಡಸರ ಕೈಯ್ಯಲ್ಲಿ ಕೂಸು ನಿಲ್ಲದು. — ಹೆಂಗಸರ ಬುದ್ಧಿ ಮೊಣಕಾಲಿನ ಕೆಳಗೆ (Prvs.).

**ಹೆಂಗುಸು hengusu.** (abbreviation of ಹೆಂಗೂಸು). = ಹೆಂಗಸು. (Bp. 24, 64; J. 7, 59; Bh. 4, 4, 88; see Mr. s. ಹೆಂಗೂಸು).

**ಹೆಂಗೆ henge. 1.** = ಹಗೆ 1, etc. manner, mode. see ಎಹೆಂಗೆ.

**ಹೆಂಗೆ henge. 2.** = ಎಹಗೆ, etc. how? (Bp. 9, 25; 31, 8; 36, 13; My.). ಹೆಂಗೆ ಅಹುದು, ಹಾಗೆ ಎಮ್ಬರ್ಥದಲ್ಲಿ ಯಥಾಸ್ತಂ ಯಥಾ ಯಥಮ್ ಎನಿಸುಗು (Nr.).

**ಹೆಚ್ಚರ heccara.** = ಎಚ್ಚರ, etc. the state of being awake. (My.).

**ಹೆಚ್ಚರಿಕೆ heccarike.** = ಎಚ್ಚರಿಕೆ. (Dp. 91, 1 seq.; My.; Te.). waking, etc.

**ಹೆಚ್ಚರು heccaru.** = ಹೆಚ್ಚರ, etc. (My.).

**ಹೆಚ್ಚಳ heccaḷa.** elation: pride, conceit (My.).

**ಹೆಚ್ಚಳಿಸು heccaḷisu.** to become elated: to begin to rejoice (J. 26, 19).

**ಹೆಚ್ಚಿಕೆ heccike.** = ಹೆಚ್ಚಿಗೆ 1. (G. 580).

**ಹೆಚ್ಚಿಗೆ heccige. 1.** = ಪೆರ್ಚುಗೆ 1, etc. increase, growth, moreness, advancement, etc. ತನ್ನ ಹೆಚ್ಚಿಗೆಗೆ (ಪರರಿಂಗೆ) ಕೇಡ ಮಾಡಿಕೊಳ್ಳದೆ ಇರುಹ (ಸ್ಥಾನ Nr.). 2, greatly, to a great extent, much, more (C.; B. 2, 1; 3, 40; 4. 1. 16. 180; 5, 223. 283). 3, extra, beyond what is expected, appointed or due (C.; B. 3, 15). ಎಷ್ಟು ನೋಡಿದಾಗ್ಯೂ ಸಾಕಾಗದೆ, ಮತ್ತೂ ಹೆಚ್ಚಿಗೆ ನೋಡಬೇಕೆನ್ದು, ಅಪೇಕ್ಷೆ ಹುಟ್ಟಿಸುವ ಒಡವೆ (ಅಸೇಚನಕ G.).

**ಹೆಚ್ಚಿಗೆ heccige. 2.** a small flat square basket of bamboo (My.).

**ಹೆಚ್ಚಿನತನ heccinatana.** increase, etc. (ಸಮುಚ್ಛ್ರಯ G.).

**ಹೆಚ್ಚಿಸು heccisu.** = ಪೆರ್ಚಿಸು, etc. to cause to increase or grow, to augment, to multiply, etc. (Bh. 1, 8, 18; C.). ಶತ್ರುವನಾಕ್ರಮಿಸಲು ಸಮರ್ಥನಲ್ಲ ಎನ್ದು, ದೇಶಕಾಲಾದಿಗಳಂ ಹಾರುತೆ ದುರ್ಗಾದಿಗಳಂ ಹೆಚ್ಚಿಸುವ ವಿಜಿಗೀಷುವಿನ ಸ್ಥಿತಿಯು (ಆಸನ Nr.). ಹೆಚ್ಚಿಸಲ್ ಪಟ್ಟದು (ಗುಣಿತ, ಆಹತ, ಗುಣಿಸಲ್ ಪಟ್ಟದು Si. 377).

**ಹೆಚ್ಚು heccu. 1.** = ಎಚ್ಚು 3, ಪೆಚ್ಚು 1, ಪೆರ್ಚು 1 q. v. to increase (v. i.), etc. (Bp. 22, 33; 23, 4; 24, 46; 30, 7; 32, 44; 40, 41. 76; Bh. 1, 10, 32; 3, 13, 34; C.). ಹೆಚ್ಚಲು ಪಟ್ಟದು (ಪ್ರವೃದ್ಧ, ಪ್ರೌಢ Nr.). ತಿಮಿಂಗಿಲವೆಮ್ಬಾ ಮಿಾನು ತಿರಿಗಾಡಿದರೆ ಕಡಲುಕ್ಕಿ ನೀರು ಹೆಚ್ಚುವದು (Si. 88); ಶತ್ರುವಿಗಿನ್ತಲೂ ತಾನು ಹೆಚ್ಚಿರುವಿಕೆ (ವೃದ್ಧಿ 263); ಅಳತೆ ಹೆಚ್ಚಿದ ಧಾನ್ಯಾದಿಗಳು (ನಿದಿಗ್ಧ, ಉಪಚಿತ 377); ಹೆಚ್ಚಿರುವಿಕೆ (ಕಾಷ್ಠೆ, ಉತ್ಕರ್ಷ 416). — ಹೆಚ್ಚು ಹೆಚ್ಚು. (*i. e.* ಹೆಚ್ಚುತ್ತ ಹೆಚ್ಚು). (B. 5, 301; My.). (Tu.).

**ಹೆಚ್ಚು heccu. 2.** = ಎಚ್ಚು 4, ಪೆಚ್ಚು 2, ಪೆರ್ಚು 2 q. v. increase, etc.; more, excessive, etc. (Bp. 28, 47; 40, 4; C.). ಹೆಚ್ಚು ನೀರೆಱೆದು (Prll. 3, 26). ಪಿತೃಮಾನಕ್ಕಿನ್ತಲೂ ದೇವಮಾನ ಹನ್ನೆರಡರಷ್ಟು ಹೆಚ್ಚು (Si. 44); ಮೇರೆದಪ್ಪಿ ಹೆಚ್ಚು ಮಾತಾಡುವಿಕೆ (ಅತಿವಾದ, etc. 57); ಹತ್ತಱನ್ದ ಹೆಚ್ಚು ಗುಣಿಸಲ್ ಪಟ್ಟ ದಶಕಸ್ಥಾನಗಳ ಲೆಕ್ಕಗಳು (ದಶಗುಣೋತ್ತರಂ 327); ನಾನು ಹೆಚ್ಚಾದವನು ಎಮ್ಬ ಚಿತ್ತಾನ್ನತ್ಯ (ಮಾನ, etc. 68); ಗುಣದಿನ್ದಲೂ ರೂಪದಿನ್ದಲೂ ಜಾತಿಯಿನ್ದಲೂ ಹೆಚ್ಚಾದವಳು (ವರಾರೋಹೆ, ಉತ್ತಮೆ, etc. 182); ಹೆಚ್ಚಾದ ಬಲ (ವಿಕ್ರಮ, ಅತಿಶಕ್ತಿತೆ 293); ಹೆಚ್ಚಾಗಿ ಬನ್ದ ಪ್ರಯೋಜನ (ಲಾಭ, ಅಧಿಕಫಲ 324); ಹೆಚ್ಚಾದದು (ಪ್ರಭೂತ, ಪ್ರಚುರ, ಬಹುಲ, ಸ್ಥಿರ, etc. 370); ಹೆಚ್ಚಾಗಿರುವಿಕೆ (ಉತ್ಕರ್ಷ, ಅತಿಶಯ 390). ನೀರು ಹೆಚ್ಚಾಗಿ ಹರಿಯುವದು (G. 97). ನುಚ್ಚಾದರೂ, ಹೆಚ್ಚಿನ್ತ, ಭಾವಿಸಬೇಕು. — ಪೋಲೀ ದನಕ್ಕೆ ಹಾಲು ಹೆಚ್ಚು, ಕೂಲೀ ಮುಣ್ಡೆಗೆ ನಾಲಿಗೆ ಹೆಚ್ಚು. — ಬಣ್ಬರಲ್ಲಿ ತಣ್ಟೆ ಹೆಚ್ಚು, ನಣ್ಬರಲ್ಲಿ ಗರ್ವ ಹೆಚ್ಚು. — ಸ್ಮಾರ್ತರಿಗೆ ಸ್ವಾರ್ಥ ಹೆಚ್ಚು, ವೈಷ್ಣವರಿಗೆ ಉಷ್ಣ ಹೆಚ್ಚು (Prvs.). — ಹೆಚ್ಚು ಕಡಮೆ. increase and decrease; difference; inequality; variation; more or less, about (My.). ಯಜ್ಞದಲ್ಲಿ ಹೆಚ್ಚು ಕಡಮೆ ಬಾರದನ್ತೆ ಸರಿ ನೋಡುತ್ತ ಇರುವ ಋತ್ವಿಕ್ಕು (ಸದಸ್ಯ, ವಿಧಿದರ್ಶಿ Si. 237). — ಹೆಚ್ಚು ಕಡಿಮೆ. = ಹೆಚ್ಚು ಕಡಮೆ. (C.; ವೈಷಮ್ಯ G.). ಬಂಗಾರಕ್ಕೂ ಹಿತ್ತಾಳಿಗೂ ಹೆಚ್ಚು ಕಡಿಮೆ ಏನು? (B. 1, 19). ನಡತೆಗಳಲ್ಲಿ ತಕ್ಕ ಹೆಚ್ಚು ಕಡಿಮೆಗಳನ್ನು ಮಾಡಿದರೆ ಸಂಸಾರದೊಳಗಿನ ಹಲವು ತರದ ತಾಪವು ನಿವಾರಣವಾಗಿ, ಸುಖವಾಗುವದು (B. 4, 190). — ಹೆಚ್ಚು ಕುನ್ದು. = ಹೆಚ್ಚು ಕಡಮೆ. (Bp. 4, 45; 6, 1; 40, 61; 54, 11; Bh. 1, 8, 31). ಯೋಗವಿಧಾನದ ಹೆಚ್ಚು ಕುನ್ದುಗಳ ನೋಡುವವರು ಸದಸ್ಯರೆನಿಸುಗು (Nr.). see Mr. s.

ಹಲ್ಲು. — ಹೆಚ್ಚುಗುಣಿಮಣಿ. = ಹರಳುಗುಣಿಮಣಿ. (My.). — ಹೆಚ್ಚು ಗುಣಿಸು. to multiply (My.). — ಹೆಚ್ಚುಗೊಳಿಸು. -ಕೊಳಿಸು. to increase (v. t., ವರ್ಧಿಸು, ಹೆಚ್ಚಿಸು G.; B. 5, 97. 98. 166). — ಹೆಚ್ಚು ಗೊಳ್ಳು. -ಕೊಳ್ಳು. to increase (v. i., B. 5, 98). — ಹೆಚ್ಚು ತಿಳಿ. to know more (My.). 2, to estimate higher (B. 4, 199). — ಹೆಚ್ಚು ಪಾರುಪತ್ಯ. unwarrantable, improper superintendence (My.). — ಹೆಚ್ಚುಮಗ್ಗಿ. the multiplication-table that begins with 11 × 11 (My.; *cf.* ಸರಮಗ್ಗಿ). — ಹೆಚ್ಚು ಮಾಡು. to increase (v. t.; C.; B. 3, 124). — ಹೆಚ್ಚು ಹೆಚ್ಚು. rep. (B. 5, 117). — ಹೆಚ್ಚುಉಳಿ. -ಉಳಿ. to remain (B. 5, 85). — ಹೆಚ್ಚೆಚ್ಚು. -ಎಚ್ಚು. rep. ಹೆಚ್ಚೆಚ್ಚಿಗೆ, excessively (B. 2, 16).

**ಹೆಚ್ಚು heccu. 3.** = ಹಚ್ಚು 3, etc. to cut up small, to mince, as vegetables, the kernel of the cocoanut, sugar-cane, etc. (C.; B. 1, 8; 2, 5. 42; 4, 177); to cut into small pieces, as a body (J. 26, 67). ಹೆಚ್ಚಿದ ಪಲ್ಯಕ್ಕೆ ನುಚ್ಚಿನ ಅನ್ನವೇ? (Prv.).

**ಹೆಚ್ಚುಗಾರಿಕೆ heccu-gārike.** exaltation. ತನ್ನ ಹೆಚ್ಚುಗಾರಿಕೆಯ ಮಾತು ಹೇಳಿ ಕೊಳ್ಳುತ್ತಾನೆ (My.).

**ಹೆಚ್ಚುಗೆ heccuge.** = ಪೆಚ್ಚುಗೆ 1, etc. increase, growth, augmentation, swelling, etc. (ವಿತಾನ, ಪೆರ್ಚುಗೆ Nn. 115; ಕುಕೂಲ, ಉತ್ಕೃಷ್ಟ 141; ಅತಿ, ಪ್ರಕರ್ಷ Si. 467; Bh. 1, 8, 48). ಐಶ್ವರ್ಯದ ಹೆಚ್ಚುಗೆ (ಸಮೃದ್ಧಿವಿಶೇಷ Nn. 84); ಜ್ಞಾನದ ಹೆಚ್ಚುಗೆ (ಜ್ಞಾನೋತ್ಕೃಷ್ಟತೆ 141).

**ಹೆಚ್ಚುಲಿ hecculi.** — ಹೆಚ್ಚುಲಿಹುಲ್ಲು. a grass often cultivated for its grain, Eleusine stricta Roxb. (St. & Pl.).

**ಹೆಚ್ಚುವಿಕೆ heccuvike.** increasing, etc. (ಸಮೃದ್ಧಿ G.; ಸ್ಫಾತಿ, ವೃದ್ಧಿ Si. 389).

**ಹೆಚ್ಚೆ hecce. 1.** = ಹಚ್ಚೆ 1, etc. tattoo (My.).

**ಹೆಚ್ಚೆ hecce. 2.** = ಹಚ್ಚೆ 2. a bamboo-split (My.).

**ಹೆಜ್- hej.** = ಹೆಗ್ 1-. largeness, etc. — ಹೆಜ್ಜಾಜಿ. Arabian jasmine, Jasminum sambac Ait. (ಸಪ್ತಲೆ, ನವಮಾಲಿಕೆ Si. 139). — ಹೆಜ್ಜಾಲಿ. a large babool tree. ಬಾಚಿಯ ಗಿಡದಡಿಯಲಿ ಹೆಜ್ಜಾಲಿಯ ಮರ ತಾನು ಹುಟ್ಟಿ ಬೆಳೆಯಲು ಮತ್ತಂ ಕೂಟರು ಹೆಚ್ಚಿದ ಶಾವಿಲ ಬಾಚುವವನ್ ಆಳಾಗ ಬಹುದೇ? (Subhāṣita kandapadya). — ಹೆಜ್ಜಾವೆ. N. of a plant (ವೆಜನಿ Mr. 110, o. r. ಹೆಜ್ಜಾತಿ). — ಹೆಜ್ಜಿಗಣೆ. a large leech (My.; ದುರ್ನಾಮ, ದೀರ್ಘಕೋಶಿಕೆ Si. 90). — ಹೆಜ್ಜೇನು. superior honey deposited in large combs (My.). ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ (Sp.).

**ಹೆಜ್ಜೆ hejje.** = ಪಜ್ಜೆ, etc. a foot-step; a foot-print, the mark of a foot, track (Bh. 1, 5, 5; 3, 13, 15; C.; B. 3, 44). 2, the foot (ಪದ, ಅಂಘ್ರಿ Si. 431; C.; B. 3, 108; 5, 238. 258). — ಹೆಜ್ಜೆಯಳತೆ. -ಅಳತೆ. the measure of a foot (My.). — ಹೆಜ್ಜೆ ಹೆಜ್ಜೆ. rep. (J. 30, 23).

**ಹೆಂಚು heñcu.** = ಹಂಚು 4, etc. a tile; etc. (My.; Si. 111; Te. ಪೆಂಕು, ಪೆಂಚು, a potsherd). — ಹೆಂಚಿನ ಮನೆ. a house with a tiled roof (My.). — ಹೆಂಚುಚೂರು. a potsherd (ಶರ್ಕರೆ Si. 451). — ಹೆಂಚುಹೊದಿಕೆ. a tiled roof (Si. 111).

**ಹೆಟ್ಟ heṭṭa. 1.** dregs of castor-oil (ಏರಣ್ಡಕಿಟ್ಟ Śm. 89). *cf.* ಪೆಟಿ 2.

**ಹೆಟ್ಟ heṭṭa. 2.** (ಹೂಟಿ Śm. 89). yoking?

**ಹೆಟ್ಟ heṭṭa. 3.** = ಪೆಟ್ಟ, etc. a lump of earth, a clod (ಲೋಷ್ಟ Śm. 89).

**ಹೆಟ್ಟ heṭṭa. 4.** = ಎಟ್ಟ, etc. a bush-harrow (My.).

**ಹೆಟ್ಟ heṭṭa.** Tbh. of ಹೃಷ್ಟ (Śmd. 353). enraptured, etc.

**ಹೆಟ್ಟಿಗೆ heṭṭige.** a stout beam (My.). ಬಟ್ಟತಲೆಯವನಾದರೆ ಹೆಟ್ಟಿಗೆ ಹೊತ್ತಾನೇ? — ಮಟ್ಟ ನೋಡ ಬೇಕಾದರೆ ಹೆಟ್ಟಿಗೆಯಿನ್ದ ಆದೀತೇ? (Prvs.).

**ಹೆಟ್ಟಿಗೆ heṭṭige.** = ಪೆಟ್ಟಿಗೆ, etc. a dove-cot (ಕಪೋತ, ವಿಟಂಕ Mr. 200).

**ಹೆಟ್ಟು heṭṭu. 1.** = ಪೆಟ್ಟು 1. to beat, to give a blow, as with the hand, a staff, a hammer, etc. (My.). ಬಿಟ್ಟರದು ಹಾಯುವದು, ಗಿಡಗ ತಾನಲ್ಲ; ದಿಟ್ಟರಿಗೆ ಹೆಟ್ಟುವದು, ಪೆರಣ ತನಗಿಲ್ಲ (an arrow, Beḍagucaupadi). 2, to push or put into, to insert (as a stone, etc. to shut a hole, etc.); to put (My.). ಅಟ್ಟ ಪಾಯಸದಲ್ಲಿ ಕೆರಾ ಹೆಟ್ಟಿದ ಹಾಗೆ. — ಅಗುಳು ನುಂಗಲಿಕ್ಕೆ ತೀರದವನ ಬಾಯಲ್ಲಿ ಕಡಬು ಹೆಟ್ಟಿದ. — ಉಮ್ಬುವದಕ್ಕೆ ಉಡುವದಕ್ಕೆ ಅಕ್ಕನ ಕರೆ, ಕೋಳಕ್ಕೆ ಹೆಟ್ಟುವದಕ್ಕೆ ಬಾವನ ಕರೆ! — ಮುಳ್ಳು ತೆಗದು, ಕೊಳ್ಳಿ ಹೆಟ್ಟಿದ ಹಾಗೆ (Prvs.). 3, to push the penis into the vagina (My.). — ಹೆಟ್ಟಾಟ. -ಆಟ. mutual striking or pushing or wrangling. ಬಡ್ಡ ಬಣ್ಡಾಟ, ಹೇಱು ಹೆಟ್ಟಾಟ, ತಲೆನೊಟ್ಟ ಪರಮ ಸುಖ. — ಮುಟ್ಟು ತಿಳಿದವನ ಸಂಗಡ ಹೆಟ್ಟಾಟ ಮಾಡ ಬಾರದು (Prvs.).

**ಹೆಟ್ಟು heṭṭu. 2.** = ಪೆಟ್ಟು 2, etc. a stroke, a blow (My.).

**ಹೆಟ್ಟುಗೆ heṭṭuge.** a female friend (ಗೆಳತಿ, ಸಖಿ Ct. I, 15; Kk. 29; Śm. 74); an affectionate or beloved woman, a wife (ಕಾಮಿನಿ Ct. II, 78; ವನಿತೆ Ss.; Bp. 11, 33; Śāstrasāra in W. v. 1565).

**ಹೆಟ್ಟೆ heṭṭe.** = ಪೆಟ್ಟೆ, etc. a lump of earth, a clod (ಲೋಷ್ಟಕ, ಲೋಷ್ಟ Hlā.).

**ಹೆಡ heḍa.** = ಪೆಡ, etc., ಹೆಱ[3] 1. the state of being behind, etc. — ಹೆಡಕಟ್ಟು. hind-binding. — ಹೆಡಕಟ್ಟು. -ಕಟ್ಟು. to restrain by binding the arms to the back, to pinion (My.). — ಹೆಡಗುಡಿ. -ಕುಡಿ. hind-point. — ಹೆಡಗುಡಿ ಕಟ್ಟು. to pinion [ಮುನ್ದೆ ಹೆಡಗುಡಿಯ ಕಟ್ಟಿ ಕುಳ್ಳಿರಿಸುವ ಪ್ರಾಪ್ತಿಯುಣ್ಟಾದ ಕಾರಣ Bv. 396]; (Rām. 6, 44, 11). — ಹೆಡಗೆಯ್. -ಕೆಯ್. the arms backward. -ಹೆಡಗೆಯ್ ಕಟ್ಟು. to pinion. (Dp. 89, 2). — ಹೆಡತಲೆ. = ಪೆಡದಲೆ. the back of the head (Bp. 46, 13; Rām. 5, 8, 58; Dp. 4; C.). ಹೆಡತಲೆಯ ಕುಣಿ (ಅವಟು, ಘಾಟೆ, ಕೃಕಾಟಿಕೆ Nr.). ಹೆಡತಲೆಯೊಳಗಿರುವ ನರ (ಮನ್ಯೆ Si. 205). — ಹೆಡಮುರಿಕೆ. = ಹೆಡಮುರಿಗೆ. — ಹೆಡಮುರಿಕೆ ಬಿಗಿಸು. to cause to pinion (B. 4, 169). — ಹೆಡಮುರಿಗೆ. turning round or twisting (the arms) to the back, pinioning (G. 577). — ಹೆಡಮುರಿಗೆ ಕಟ್ಟು. to pinion (B. 3, 126).

**ಹೆಡ heḍa.** = ಹೆಡಗೆ, etc., ಹೆಡೆ 2. Tbh. of ಪಿಟ. a basket, a box. — ಹೆಡಗೋಣ್ಟೆ. -ಕೋಣ್ಟೆ. = ಹೆಡಗೆಗೋಣೆ q. v., ಹೆಡೆಗೋಣ್ಟೆ.

**ಹೆಡಕು heḍaku.** the back or nape of the neck (ಘಾಟೆ, ಅವಟು, ಕೃಕಾಟಿಕೆ Hlā.; ಕೃಕಾಟಿಕೆ Mr. 327; ಹೆಕ್ಕತ್ತು G.; Rām. 5, 1, 2; 6, 39, 6; B. 4, 211); the hind part of a fort (Rām. 4, 6, 20).

**ಹೆಡಗೆ heḍage.** = ಪೆಡಗೆ, etc. a basket (ವಿಡಕ Mr. 208, o. rs. ಹೆಡಿಗೆ, ಹೆಡೆಗೆ; Bp. 23, 7; 49, 44; 56, 9; C.; B. 5, 135). — ಹೆಡಗೆಗೋಣ್ಟೆ. -ಕೋಣ್ಟೆ. (Śmd. 386, o. rs. ಹೆಡಗೋಣ್ಟೆ, ಹೆಡೆಗೆಗೋಣ್ಟೆ). a basket-like fort (?).

**ಹೆಡಸು hedasu.** (= ಪೆಡಸು). dandruff (S. Mhr.).

**ಹೆಡಿಗೆ hedige.** = ಹೆಡಗೆ, etc. a large basket. (My.; ಕಾಣ್ಡಾಲ, ಪಿಟಿ Si. 307; see Mr. s. ಹೆಡಗೆ; Sp. s. ಕಣುಗಾಣ್). — ಹೆಡಿಗೆಗುಮ್ಮ. a basket considered as a devil. ರವಿ ಕಾಣದ್ದು ಕವಿ ಕಣ್ಡ; ಕವಿ ಕಾಣದ್ದು ಹೆಡಿಗೆಗುಮ್ಮ ಕಣ್ಡ (Prv.).

**ಹೆಡೆ hede. 1.** = ಎಡೆ 2, ಪೆಡೆ. the expanded hood of a cobra (ಸ್ಫಟೆ, ಫಣೆ Si. 78; Bp. 11, 12; 51, 59; 58, 48; Bh. 1, 20, 61; C.; B. 2, 8). ಹಾವಿನ ಹೆಡೆ (ಫಣ, ಫಣೆ, ಫಟೆ Hlā.; ಸ್ಫಟೆ Nr.). [ಹಾವಿನ ಹೆಡೆಗಳ ಕೊಣ್ಡಾ ಕೆನ್ನೆಯ ತುಱುಸುವನ್ತೆ Bv. 661].

**ಹೆಡೆ hede. 2.** = ಹೆಡ, etc. — ಹೆಡೆಗೋಣ್ಟೆ. -ಕೋಣ್ಟೆ. (Kk. 99). = ಹೆಡ ಗೋಣ್ಟೆ, etc.

**ಹೆಡೆಗೆ hedege.** = ಹೆಡಗೆ, etc. a basket (Bp. 56, 12; Bh. 1, 10, 25; My.).

**ಹೆಡ್ಡ heddu-a 3.** = ಎಡ್ಡ 2. a dull, stupid man, a fool (ಅಜ್ಞ, ಮೂಢ, ಯಥಾಜಾತ, ಮೂರ್ಖ, ವೈಧೇಯ, ಬಾಲಿಶ Nr.; ಗಾವಿಲ, ಗಾಮ್ಪ. ಎಗ್ಗ Śs.; C.; B. 3, 51). ಸಿರಿ ಭರವುಳ್ಳಾಗಲು ಮಱೆಯದವನೆ ಜಾಣ; ಕೊಱತೆಯಾಗೆ, ಯಾಕೊಡವೆನಗಿಲ್ಲೆನ್ನು, ಅಱಸುವವ ಹೆಡ್ಡ (Sp.). ಹೆಡ್ಡನಾದರೂ ದೊಡ್ಡವನೇ ಲೇಸು. (ಬಡ್ಡನಾಗಿರಬೇಕು). — ದಡ್ಡನಿಗೆ ಹೆಡ್ಡ ನೆನ್ನರೆ ಮುಡ್ಡನಿಗೆಜಾಡಾ ಅನ್ದ ಹಾಗೆ. — ಜಾಣನಿಗೆ ಮೂಱು ಕಡೆ, ಹೆಡ್ಡನಿಗೆ ಒನ್ದೇ ಕಡೆ (Prvs.). — ಹೆಡ್ಡದಾನೋದರ. N. (Bp. 56, 33).

**ಹೆಡ್ಡತನ heddatana.** = ಎಡ್ಡತನ 2. stupidity, foolishness (ಮೆಡೆ Śm. 99; My.). ಒಡ್ಡನ್ತಿ ಮಾಡಿದರೆ ಹೆಡ್ಡತನ ಹೋದೀತೇ? (Prv.). see Prv. s. ಮಹಾಲಕ್ಷ್ಮಿ.

**ಹೆಡ್ಡತಿ heddati.** = ಎಡ್ಡತಿ. a stupid, foolish woman (My.).

**ಹೆಡ್ಡಯ್ಸು heddaysu.** to flout, to treat with contempt (Rām. 3, 3, 23; Mhr. ಹೇಡ್ಡಾವಿಷೇಂ).

**ಹೆಡ್ಡು heddu.** = ಎಡ್ಡು 2. stupidity, foolishness (My.; see ಅತಿ-). — ಹೆಡ್ಡಾಟ. -ಆಟ. stupid, foolish behaviour (My.). — ಹೆಡ್ಡಾಳು. -ಆಳು. a stupid, foolish person. ಹೆಡ್ಡಾಳಾದರೂ ಒಡ್ಡಾಳಾಗಿರ ಬೇಕು (Prv.).

**ಹೆಡ್ಡೆ hedde.** = ಹೆಡ್ಡತಿ. (My.).

**ಹೆಣ್ hen.** = ಪೆಣ್, etc. a female; a woman (J. 2, 61). ಹೆಣ್ಣಾದೊಡಂ ಗಣ್ಡಾದೊಡಂ (Śmd. 148). ಹೆಣ್ಣಳ್ (Bh. 1, 8, 35). ಹೆಣ್ಣ ಕೊಟ್ಟ ಅತ್ತೆ (ಗೃಹಮಾತೆ Mr. 313). ಹೆಣ್ಣ ಕೊಟ್ಟವಂ (ವಧುತಾತ 313). — ಹೆಣ್ಣಂಚೆ. -ಅಂಚೆ. a female swan, a goose (ವರಲೆ, ವರಟೆ Hlā.; ವರಟೆ Si. 175). — ಹೆಣ್ಣಾನೆ. -ಆನೆ. a female elephant (ಬಸೆ Śmd. 342; ಪಿಡಿ Ct. I, 102; ಪೆಣ್ದನ್ತಿ, ಕರೇಣು Nn. 120; ಕರೇಣು Si. 420). — ಹೆಣ್ಣಾವೆ. -ಆವೆ. a female turtle (ಕೂರ್ಮಿ Nr.; ಕಮಠಿ, ಡುಲಿ Nr.; ಡುಲಿ Mr. 411). — ಹೆಣ್ಣೇವೆ. -ಏವೆ. = ಹೆಣ್ಣಾವೆ. (ಡುಲಿ Hlā.). — ಹೆಣ್ಣೊಣ್ಟೆ. -ಒಣ್ಟೆ. a female camel (ಉಷ್ಟ್ರಿಕೆ, ಉಷ್ಟ್ರಿ Nn. 85).

**ಹೆಣ hena. 1.** = ಪೆಣ. a corpse; a carcass (ಪ್ರೇತ, ಪರೇತ, ಕುಣಪ, ಶವ Hlā.; ಕುಣಪ, ಶವ Nr., Si. 297; ಪ್ರೇತ, ಕುಣಪ Mr. 395; ಮೃತ, ಕುಣಪ Nn. 11; Bp. 21, 17; 32, 53; 46, 36. 60. 78; 54, 74; C.). ಪ್ರಾಣ ತೊಲಗಿದ ಹೆಣನು ಕಿಚ್ಚಿಗಂಜಲು ಬಲ್ಲುದೆ? (i. e. ಬಲ್ಲುದೆ? Dp. 87). ಹೆಣ ಸುಟ್ಟರೂ ರುಣ ಸುಡಲಿಲ್ಲ. — ಹೆಣ ಹೊಱುವವನಿಗೆ ರೋಮ ಬಾದಿಯೇ? — ಹೆಣದವರು ಹೆಣಕ್ಕೆ ಅತ್ತರೆ ಕೊಱವ ಮುಡ್ಡಿಗೆ ಅತ್ತ. — ದಣು ಪಟ್ಟವನು ಹೆಣವಾದರೂ ಹೊಱನೇ? — ನೊಣ ಕೂಡಿಸಿದ ಜೇನು ಮಣುವಾದರೆ ಹೆಣ ಹೊತ್ತವನಿಗೇನು? — ನೊಣ ಕೂತರೆ ವ್ರಣ ಹೊರ್ತು ಹೆಣ ಜೀವಿಸೀತೇ? — ಸಣಸುವವನಾದರೆ ಹೆಣ ನೋಡಿ ಹೆದಱ್ಯಾನೇ? — ಸುಡುಗಾಡಿಗೆ ಹೋದ ಹೆಣ ತಿರುಗಿ ಬನ್ದೀತೇ? — ರಾಯ ಸತ್ತರೂ ಹೆಣ, ನಾಯಿ ಸತ್ತರೂ ಹೆಣ. — ಹಣವೆನ್ದರೆ ಹೆಣ ಬಾಯಿ ಬಿಡುತ್ತದೆ. — ಹಣ ವಿಲ್ಲದವನು ಹೆಣಕ್ಕಿನ್ತ ಕಡೆ. — ಅಪ್ಪ ಇಲ್ಲದವನ ಹೆಣವ ಒಪ್ಪ ಮಾಡುವವರು ಯಾರು? (Prvs.). — ಹೆಣದತ್ತ. -ಅತ್ತ (i. e. ಅನ್ಥವ). a good-for-nothing man; a coward (My.). — ಹೆಣದಿನುಹಿ. -ತಿನುಹಿ. a corpse-eater, a demon (Bh. 10, 3, 11). — ಹೆಣದೆಱಹು. -ತೆಱಹು. an open space between corpses (Bh. 10, 3, 14). — ಹೆಣಮಯ. full of corpses (J. 27, 7). — ಹೆಣಮುಣ್ಡೆ. a good-for-nothing woman (My.). — ಹೆಣಮೋಱೆ. a lifeless, spiritless, stupid fellow (My.).

**ಹೆಣ hena. 2.** P. p. of ಹೆಣೆ 1. — ಹೆಣಕೊಳ್ಳು. to inter-twine (v. i., as creepers, snakes, etc., My.). 2, to plait, etc. (My.).

**ಹೆಣಗಿಸು henagisu.** = ಪೆಣಗಿಸು. to cause to fight (My.).

**ಹೆಣಗು henagu.** = ಪೆಣಗು. to wrangle, to quarrel, to fight, to strive (Bp. 18, 37; 58, 39; Bh. 2, 2, 97. 101. 105; J. 22, 29; C.; B. 3, 99). ಜಣುಗುವವನ ಸಂಗಡ ಹೆಣಗ ಬಾರದು. — ಟೊಣಪೇ ಶಾಸ್ತ್ರಕ್ಕೆ ಹೆಣಗೋದೇ ಅರ್ಥ. — ಪಣ ಕಟ್ಟುವವನ ಹತ್ತರ ಹೆಣಗ ಬಹುದು, ಹಣ ಕೂಡಿಸುವವನ ಹತ್ತರ ನಿಲ್ಲಲಾಗದು. — ಮಣಗದ ಮನುಷ್ಯ ಹೆಣಗಿದರೂ ಬಗ್ಗ (Prvs.). — ಹೆಣಗಾಟ. -ಆಟ. quarrel, fight [ಶುದ್ಧಾತ್ಮ ಪರಮಾತ್ಮರಿಬ್ಬರೂ ಬನ್ದು ರತ್ನಕ್ಕೆ ಹೆಣಗಾಟವನಾಡಿಹರು Bv. 905]; (My.). — ಹೆಣಗಾಡು. -ಆಡು. = ಹೆಣಗು. (C.; B. 2, 40).

**ಹೆಣಿ heni.** = ಹೆಣೆ 1, etc. to plait, etc. (My.).

**ಹೆಣಿಕೆ henike.** = ಎಣಿಕೆ 2, ಹೆಣಿಗೆ. (My.).

**ಹೆಣಿಗೆ henige.** plaiting, etc.; that is plaited, etc. (My.). — ಹೆಣಿಗೆಕೆಲಸ. work done by plaiting, etc. (My.); the art of plaiting, etc. (My.).

**ಹೆಣಿಲು henilu.** = ಹಿಣಿಲ್ 2, etc. a braid of hair, braided hair (Rām. 6, 53, 32).

**ಹೆಣೆ hene. 1.** = ಎಣೆ 2, ಪೆಣೆ 1, etc. to intertwine (v. t.), etc., to plait, as mats, baskets, etc.; to braid, as the hair; to work in meshes or knit, as nets; to rattan, as a chair (Bp. 47, 30; C.; B. 2, 42). P. ps. ಹೆಣದು, ಹೆಣೆದು, ಹೆಣ್ದು. 2, to intertwine (v. i.), to be joined, etc.

**ಹೆಣೆ hene. 2.** = ಎಣೆ 1, ಪೆಣೆ 2. joining together; the state of being joined, etc. see Nn. 144 s. ಸ್ಕನ್ಧ No. 2. — ಹೆಣೆ ಕಟ್ಟು. to tie a row of cattle to the pillar in the middle of a threshing floor so as to tread out corn (My.).

**ಹೆಣ್ಟ henta.** = ಹೆಣ್ಟೆ 1, etc. — ಹೆಣ್ಟ ಹೊಡೆ. = ಹೆಣ್ಟೆ ಹೊಡೆ. (S. Mhr.).

**ಹೆಣ್ಟೆ hente. 1.** = ಎಟ್ಟ, etc. a bush-harrow. — ಹೆಣ್ಟೆ ಹೊಡೆ. = ಎಟ್ಟಾ ಹೊಡೆ, q. v. (My.).

**ಹೆಣ್ಟೆ hente. 2.** = ಪೆಟ್ಟ, etc. a lump of earth, a clod (ಲೋಷ್ಟ Nr., Si. 302; ಪೆಟ್ಟೆ Śs.; ಪೆಟ್ಟ Śm. 64; My.). ಮಣ್ಣಿನ ಹೆಣ್ಟೆ (ಲೋಷ್ಟ G.). 2, an unburnt brick (B. 4, 121). ಕೊಱಚೆ ಮೇಲೆ ಹೆಣ್ಟೇ ಹಾಕಿ, ನೋಱೇ ಮೇಲೆ ಸಿಡಿಸಿ ಕೊಣ್ಡ (Prv.). — ಹೆಣ್ಟೆ ಗುದ್ದ. = ಹೆಣ್ಟೆಗೊದ್ದ. (My.). — ಹೆಣ್ಟೆಗೊಡತಿ. -ಕೊಡತಿ. a large wooden hammer for breaking clods in fields (My.); a kind of harrow (ಲೋಷ್ಟಭೇದನ, ಕೋಟಿಶ Nr.). — ಹೆಣ್ಟೆಗೊದ್ದ. a kind of lizard or chameleon (ಸರಟ, ಕೃಕಲಾಸ, ಓತಿಕ್ಯಾಟ Si. 170; My.).

**ಹೆಣ್ಡ henda. 1.** = ಪೆಣ್ಡ. a female, a woman; a wife. plurals ಹೆಣ್ಡರು (C.). ಹೆಣ್ಡನ್ದಿರು (B. 4, 214), ಹೆಣ್ಡರ್, ಹೆಣ್ಡರು. ಹೆಣ್ಡರಿಲ್ಲದ ಮನೆ ದಣ್ಡು, ಗಣ್ಡರಿಲ್ಲದ ಮನೆ ಬಣ್ಡು. — ಪೆಣ್ಡಾರಿಯರು

ಬರುವಾಗ ಹೆಣ್ಡರ ಗೊಡವೆ ಏನು? — ಮಕ್ಕಳೆಲ್ಲ ಮನೆವಾರ್ತೆ ಮಾಡಿದರೆ ಅಪ್ಪಗೆ ಯಾಕೆ ಇಬ್ಬರು ಹೆಣ್ಡರು? (Prvs.). ದಮ್ಪತಿಗಳೆನಲು, ಸತಿ ಪತಿಗಳೆನೆ ಗಣ್ಡ ಹೆಣ್ಡಿರಿಗೆ ಪೆಸರೆನಿಕ್ಕುಂ (Mr. 24). ಹೆಣ್ಡರಾ ಕೌತುಕವ ಗಣ್ಡರೂ ಬಲ್ಲರೇ? ಗಿಣ್ಡಿನೀರೊಳಗೆ ಕಿಱುಮೀನ ಹೆಜ್ಜೆಯನು ಕಣ್ಡಾತನಾರು? (Sp.). — ಹೆಣ್ಡರು ಮಕ್ಕಳು. wife and children; wives and children (C.; B. 4, 153).

**ಹೆಣ್ಡ henḍa. 2.** (fr. ಹಿಟ್ಟು). vinous liquor or toddy extracted from the wild date tree (My.; B. 2, 14), etc. (ಮೇದಕ, ಜಗಲ Nr.; ಸುರೆ, ಹಲಿಪ್ರಿಯೆ, ಹಾಲೆ, ಪರಿಸ್ರುತ್, ವರುಣಾತ್ಮಜೆ, ಗನ್ಧೋತ್ತಮೆ, ಪ್ರಸನ್ನೆ, ಇರೆ, ಕಾದಮ್ಬರಿ, ಪರಿಸ್ರುತೆ, ಮದಿರೆ, ಕಶ್ಯ, ಮದ್ಯ Si. 347; ಸುರೆ, ವಾರುಣಿ 420; ಇರೆ 451). ಹೆಣ್ಡದ ಕಡಲು (ಸುರೋದ Si. 81). ಹೆಣ್ಡಾ ಮಾಱುವವನು (ಶೌಣ್ಡಿಕ, ಮಣ್ಡಹಾರಕ 339); ಹಿಪ್ಪೇಹುವ್ವಿನ ಹೆಣ್ಡ (ಮಧ್ವಾಸವ 347); ದ್ರಾಕ್ಷೇ ಹಣ್ಣಿನ ಹೆಣ್ಡ (ಮಾಧ್ವೀಕ 347); ಅರೇ ಹುವ್ವು ಬೆಲ್ಲ ಕಲಗಚ್ಚು ನೀರಿನಿನ್ದ ಮಾಡಿದ ಹೆಣ್ಡ (ಮೈರೇಯ 348); ಪಕ್ವವಾದ ಕಬ್ಬಿನ ರಸದಿನ್ದ ಮಾಡಿದ ಹೆಣ್ಡ (ಆಸವ, ಶೀಧು, etc., ಸಾರಾಯಿ, ಕಲ್ಲು, ಬ್ರಾನ್ದಿ 348); ಹೆಣ್ಡ ಮಾಡುವದು (ಸನ್ಧಾನ, ಅಭಿಷವ 348); ಹೆಣ್ಡದ ಮೇಲಣ ತಿಳಿ (ಕಾರೋತ್ತಮ, ಸುರಾಮಣ್ಡ 348); ಹೆಣ್ಡ ಕುಡಿಯುವ ಬಟ್ಲು (ಚಷಕ 348); ಹೆಣ್ಡ ಮಣ್ಡಿಗೆ ಏಱಿದ್ದು ಕುಣ್ಡೆಬಡ ಕೊಣ್ಡರೆ ಇಱಿದೀತೇ? (Prv.). — ಹೆಣ್ಡದ ತಿತ್ತಿ. a small liquor bottle made of one skin (Mr.). — ಹೆಣ್ಡದ ಪಕಾಲಿ. a large leather bag for carrying toddy on a horse or a donkey (My.) — ಹೆಣ್ಡದ ಬುಱುಡೆ. a toddy bottle made of a sōrekāyi (My.).

**ಹೆಣ್ಡತಿ henḍati.** = ಪೆಣ್ಡತಿ, etc. a wife (ದಾರ, ಕ್ಷೇತ್ರ, ಕಲತ್ರ, ಭಾರ್ಯೆ, ವಧು, etc. Hlā.; Mr. 306; ತಲ್ಪ, ದಾರ Nr., Si. 439; ದ್ವಿತೀಯೆ Hlā.; ಭಾರ್ಯೆ, ಜಾಯೆ, etc. Dhw.; Bp. 47, 4; C.). ಹೆಣ್ಡತಿಯ ಒಡ ಹುಟ್ಟಿದ ಅಣ್ಣ ತಮ್ಮನ್ದಿರು (ಸ್ಯಾಲರು); ಸೋದರಮಾವನ ಹೆಣ್ಡತಿ (ಮಾತುಲಾನಿ, etc. Nr.). ಬಸುಱ ಹೆಣ್ಡತಿ (ಗರ್ಭಿಣಿ, etc. Hlā.). ಮಗನ ಹೆಣ್ಡತಿ (ಸ್ನುಷೆ Mr. 314). ಅಗ್ನಿಸಾಕ್ಷಿಕವಾಗಿ ಮದುವೆ ಮಾಡಿಕೊಣ್ಡ ಹೆಣ್ಡತಿ (ಪತ್ನಿ, ಪಾಣಿಗೃಹೀತಿ, ದ್ವಿತೀಯೆ, ಜಾಯೆ, etc. Si. 183). ಆ ಸಾಹೇಬನು ಎರ್ಡನೇ ಹೆಣ್ಡತಿಯನ್ನು ಮಾಡಿ ಕೊಣ್ಡನು (B. 5, 203). ಹೆಣ್ಡತಿ ಹೆಗ್ಗಡತಿ ಆದರೆ ಗಣ್ಡ ಮೂಱಿನಾಯಿಗಿನ್ತ ಕಡೆ. — ಕೆಯ್ಲಿದ್ದರೆ ಅರ್ಥ, ಹತ್ತರಿದ್ದರೆ ಹೆಣ್ಡತಿ. — ನೂಲೋ ಹೆಣ್ಡತಿಯ ಬಿಟ್ಟು, ಹೇಲೋ ಮೂಱಿಯ ತನ್ದ. — ಬಡವನ ಹೆಣ್ಡತಿ ಎಲ್ಲರ ಅತ್ತಿಗೆ. — ಮುದ್ದೆಲ್ಲಾ ಮೂಱನೆಯ ಹೆಣ್ಡತಿಗೆ. — ಮಱುಕವಿಲ್ಲದ ಹೆಣ್ಡತಿಗಿನ್ತ ಮರದ ನೆರಳು ಸುಖ. — ಶಾನಭೋಗನ ಸಮ್ಬಳ ಸನ್ತೋ? ಎನ್ದು, ಕೇಳ ಬೇಡ; ಹೆಣ್ಡತಿಯ ದೆಸೆಯವರು ಉಣ್ಡರೋ? ಎನ್ದು, ಕೇಳ ಬೇಡ. — ಸಾಯುವೆನೆನ್ದರೆ ಹೆಣ್ಡತಿ ಬಯ್ದಾಳು ಅನ್ದ ಹಾಗೆ. — ಸಾವಿರ ಕುದುರೆಗೆ ಸರದಾರನಾದರೂ ಮನೇಹೆಣ್ಡತಿ ಕಾಸ್ತಾರ. — ಸೋರುವ ಮನೆಯನ್ನೂ ಹೋರುವ ಹೆಣ್ಡತಿಯನ್ನೂ ದೂರ ಬಿಡಬೇಕು. — ಹತ್ತರಿದ್ದರೆ ಹೆಣ್ಡತಿ, ಬಱಕಿದ್ದರೆ ಅಕ್ಕ, ಒಳತು ಕೆಟ್ಟರೆ ಗೆಣೆಯ. — ಸಂಗತೀ ಗುಣ ಸೋತು ನೋಡು, ಹೆಣ್ಡತೀ ಗುಣ ಹೇತು ನೋಡು. — ಸನ್ತೇ ಸೂಳೆಯ ನಚ್ಚಿ, ಮನೇ ಹೆಣ್ಡತಿಯ ಬಿಟ್ಟ. — ಹೋರುವ ಹೆಣ್ಡತಿ, ನಾಱುವ ನೀರು ತ್ಯಜಿಸು. — ಮಕ್ಕಳಿಲ್ಲದವನಿಗೆ ಹೆಣ್ಡತಿ ಮುದ್ದು, ಹೆಣ್ಡತಿಯಿಲ್ಲದವನಿಗೆ ತಾನೇ ಮುದ್ದು (Prvs.).

**ಹೆಣ್ಡೆ henḍe. 1.** = ಎಣ್ಡೆ. cowdung (ಗೋಮಯ Ss.; Te. ಪೆಣ್ಡೆ, ಪೇಡೆ; T. ಪಿಟ್ಟೈ, a lump of beast's dung).— ಹೆಣ್ಡೆಮೂಗಕ್ಕಿ. -ಅಕ್ಕಿ. (ಪರೋಷ್ಣಿ, ತೈಲಪಾಯಿಕೆ Si. 175).

**ಹೆಣ್ಡೆ henḍe. 2.** = ಪೆಟ್ಟೆ, etc. a lump of earth, a clod (ಲೋಷ್ಟ Mr. 371; G. 57). — ಹೆಣ್ಡೆಗೊಡತಿ. -ಕೊಡತಿ. = ಹೆಣ್ಟೆಗೊಡತಿ. (S. Mhr.).

**ಹೆಣ್ಣಿಗ heṇṇiga.** = ಅಣ್ಣಿಗ. an impotent man; a coward (My.).

**ಹೆಣ್ಣಿಗತನ heṇṇigatana.** impotency; cowardice (My.).

**ಹೆಣ್ಣು heṇṇu.** = ಹೆಣ್, etc. a female; a woman (Bp. 18, 91; C.; B. 5, 289). ಹೆಣ್ಣುಂ ಗಣ್ಡು ಸೇರಿ ಸೊಗಸಿನ್ದ ಆಡುವಿಕೆ (ದ್ರವ, ಕೇಲಿ, etc. Si. 72); ಸ್ವಯಂವರದ ಹೆಣ್ಣು (ಸ್ವಯಂವರೆ, etc. 183); ಒಳ್ಳೇ ಪ್ರಾಯದ ಹೆಣ್ಣು (ತರುಣಿ, ಯುವತಿ 184); ಕಾಮವುಳ್ಳ ಹೆಣ್ಣು (ಕಾಮಿನಿ 435). ಹೇವವಿಲ್ಲದ ಹೆಣ್ಣು ಗಜುಗ ಬೆಳೆದಾ ಕಣ್ಣು (Dp. 54). ಬೆಣ್ಣೆ ಬೆಂಕಿಯ ಸಖೆಗೆ ತಣ್ಣಗಿರ ಬಲ್ಲುದೇ? ಹೆಣ್ಣಿದ್ದ ಮನೆಗೆ ಎಡ ತಾಕಿ, ಶಿವಯೋಗಿ ಮಣ್ಣುಮಸಿಯಾದ (Sp.). ಯಾತಗಣೆಯದು ಚಿಗತು ಕಾತು ಫಲವಾದನ್ದು, ಹೋತು ಹೆಬ್ಬುಲಿಯನಿಱಿದನ್ದು ಹೆಣ್ಣಿನ ಮಾತ ನೆಚ್ಚು! (Sp.). ಅಡವಿಯೊಳು ಮಱಿ ಹೊಡದು ಗಿಡ ಸೇಡುಗೊಣ್ಡನ್ದು, ಹುಡಿಯೊಳಗೆ ಕಮಲ ಬೆಳದನ್ದು ಹೆಣ್ಣಿನ ನುಡಿಯ ನೆಚ್ಚು! (Sp.). ಸುಣ್ಣವಿಲ್ಲದ ವೀಳ್ಯ, ಬಣ್ಣವಿಲ್ಲದ ಮದುವೆ, ಹೆಣ್ಣಿಲ್ಲದನ ಸಂಸಾರ ಮಳಲೊಳಗೆ ಎಣ್ಣೆ ಹೊಯಿದನ್ತೆ (Sp.). ಹೆಣ್ಣಿಗೆ ಇಟ್ಟ ಬಂಗಾರ, ಗೋಡೆಗೆ ಹಚ್ಚಿದ ಸುಣ್ಣ. — ಹೆಣ್ಣಿನ ನೆಲೆ ಕುದುರೆಯ ನೆಲೆ ಯಾರಿಗೂ ಗೊತ್ತಿಲ್ಲ. — ಹೆಣ್ಣು ದೂರದಿನ್ದ ತರ ಬೇಕು, ದನ ಹತ್ತರದಿನ್ದ ತರ ಬೇಕು. — ಹೆಣ್ಣು ಬೊಮ್ಮಣ್ಣಗೆ ಅಪರಾಧ ತಿಮ್ಮಣ್ಣಗೆ. — ಹೆಣ್ಣು ಹಡದವನ ಮನೆ ತಣ್ಣಗೆ, ಗಣ್ಡು ಹಡದವನ ಮನೆ ನುಣ್ಣಗೆ. — ಹೆಣ್ಣು ಸೊಕ್ಕಿದರೆ ಮನೆಯಲ್ಲಿ ನಿಲ್ಲದು, ಎತ್ತು ಸೊಕ್ಕಿದರೆ ಹಟ್ಟಿಯಲ್ಲಿ ನಿಲ್ಲದು. — ಹೆಣ್ಣು ಕೊಟ್ಟೆಯೋ? ಬೆನ್ನು ಕೊಟ್ಟೆಯೋ? — ಹೆಣ್ಣು ತನ್ದಿಯೋ? ಮಣ್ಣು ತನ್ದಿಯೋ? — ಹೆಣ್ಣು ಒಳ್ಳೇದೇ ಸರಿ, ಕಣ್ಣು ಮಾತ್ರ ಕಾಣುವದಿಲ್ಲ. — ಹೆಣ್ಣು ಹೆತ್ತು ತಿಳಿಯ ಬೇಕು, ಗಣ್ಡು ತೆತ್ತು ತಿಳಿಯ ಬೇಕು. — ಹೆಣ್ಣಾದರೇನು? ಮಣ್ಣಾದರೇನು? ಪುಣ್ಯವಿನಹಾ ಸಿಕ್ಕದು. — ಎಣ್ಣಿದ್ದು ಮಣ್ಣು ಆಯಿತು, ಹೆತ್ತದ್ದು ಹೆಣ್ಣು ಆಯಿತು. — ಪುಣ್ಯ ಮಾಡದೆ ಕೆಟ್ಟ, ಹೆಣ್ಣು ಹುಟ್ಟಿ ಕೆಟ್ಟ. — ಪುಣ್ಯವಿಲ್ಲದೆ ಕಣ್ಣು ಕಿತ್ತಿ ಕೊಣ್ಡರೆ ಹೆಣ್ಣು ಸಿಕ್ಕೀತೇ? — ಬಡವಗೆ ಯಾಕೆ ಸಿರಿವನ್ತನ ಹೆಣ್ಣು? (Prvs.). ಹೆಣ್ಣನ್ನು ಹೊನ್ನನ್ನು ಹಣ್ಣಾದ ಮರಗಳನು ಕಣ್ಣಿಲಿ ಕಣ್ಡು ಮನದಲ್ಲಿ ಬಯಸದಿಹ ಅಣ್ಣಗಳಾರು? (Sp.). — ಹೆಣ್ಣಾಡು. -ಆಡು. a female goat (My.). — ಹೆಣ್ಣಾಳು. -ಆಳು. a kūli woman (C.). — ಹೆಣ್ಣು ಆವೆ. a female turtle (ಕಮಠಿ, etc. Si. 90). — ಹೆಣ್ಣುಎಕ್ಕೆಯ ಗಿಡ. the shrub Calotropis procera R. Br. (Z.). — ಹೆಣ್ಣುಎರುಬುಹುಱು. (ಶಿಲಿ, ಗಣ್ಡೂಪದಿ Si. 90). — ಹೆಣ್ಣುಏಡಿ. (ಕರ್ಕಟಿ G.). — ಹೆಣ್ಣುಒಣ್ಟೆ. a female camel (C.; B. 3, 66). — ಹೆಣ್ಣುಕಣೆ. the small roller in a sugar-mill (My.). — ಹೆಣ್ಣುಕಪ್ಪೆ. a female frog (ಭೇಕಿ, ವರ್ಷಾಭ್ವಿ Si. 90). — ಹೆಣ್ಣುಕರಡಿ. a she-bear (C.; B. 3, 109). — ಹೆಣ್ಣುಕಱು. a female calf (G. 104). — ಹೆಣ್ಣುಕುಣಿಕೆ. the part of a clasp which is hooked on (My.). — ಹೆಣ್ಣುಕುದುರೆ. a mare (ಅಶ್ವೆ G.). — ಹೆಣ್ಣುಕುದುರೆ. a mare (ಪ್ರಸು, ಅಶ್ವೆ Si. 463). — ಹೆಣ್ಣುಕೂಸು. a female child (My.). — ಹೆಣ್ಣುಕೋತಿ. a she-monkey (My.; Si. 52). — ಹೆಣ್ಣುಕೋೞಿ. a hen (My.). — ಹೆಣ್ಣುಗಣ್ಡು. a female and male; a female or male (B. 5, 291). ಹೆಣ್ಣುಗಪ್ಪೆ. -ಕಪ್ಪೆ. a she-frog (ಭೇಕಿ, etc. Nr.; ವರ್ಷಾಭು Hlā.). — ಹೆಣ್ಣುಗಱು. -ಕಱು. a she-calf (C.; B. 5, 19). — ಹೆಣ್ಣುಗುಬ್ಬಚ್ಚಿ. = ಹೆಣ್ಣುಗುಬ್ಬಿ. (ಚಟಕೆ Si. 172). — ಹೆಣ್ಣುಗುಬ್ಬಿ. a female sparrow (B. 2, 6). — ಹೆಣ್ಣುಗೇಣ್ಡಾಮೃಗ. a female rhinoceros (B. 5, 250). — ಹೆಣ್ಣುಗೊರಳು. -ಕೊರಳು. a woman's voice (My.). — ಹೆಣ್ಣುಚಿಗರಿ. a female antelope (ಹರಿಣಿ G.). — ಹೆಣ್ಣುಜಲಪಕ್ಷಿ. a she-crane (ಲಕ್ಷ್ಮಣೆ Si. 175). — ಹೆಣ್ಣುತೋೞ. a she-wolf (B. 3, 86). — ಹೆಣ್ಣುದೇವತೆ. a female deity (My.). ಹೆಣ್ಣುದೇವತೆಯರು (ಮಾತಾಳಿ Nn. 136). — ಹೆಣ್ಣುನರಿ. a she-fox (B. 3, 75). — ಹೆಣ್ಣುನಾಯಿ. a bitch (ಶುನಕಿ, ಸರಮೆ Hlā.; ಶುನಿ, ಸರಮೆ Nr.; B. 3, 40). — ಹೆಣ್ಣುನೀಲಿ. the common indigo shrub, Indigofera tinctoria Lin. (St. & Pl.). — ಹೆಣ್ಣುಪತಂಗ. (ಪತಂಗಿಕೆ, ಪುತ್ತಿಕೆ Si. 175). — ಹೆಣ್ಣುಪಶು. a cow (Si. 396). — ಹೆಣ್ಣುಪಾರಿವಾಳ. a she-pigeon (B. 3, 113). — ಹೆಣ್ಣುಬಾೞು. a woman's state of life (My.). — ಹೆಣ್ಣುಮಕ್ಕಳು. female children (C.; B. 3, 32. 33; 4, 5; 5, 274); women (S. Mhr.; B. 5, 43). ಹೆಣ್ಣುಮಕ್ಕಳಿಗೆ ಹಾಡ ಕಲಿಸಿದವರಿಲ್ಲ, ನಾಯಿಗೆ

ಬೊಗಳ ಕಲಿಸಿದವರಿಲ್ಲ (Prv.). — ಹೆಣ್ಣುಮಗಳು. a woman (B. 5, 156. 291). — ಹೆಣ್ಣುಮಱಿ. a female young animal. ಗುಬ್ಬಿಗೆ ಹುಟ್ಟಿದ ಹೆಣ್ಣುಮಱಿ (ಚಟಕಿ Nr.). — ಹೆಣ್ಣುಮೀನು. (ಪ್ರೋಷ್ಠಿ, ಶಫರಿ Hlā.). ಮೀನಿನೊಳು ಹೆಣ್ಣುಮೀನು ಪ್ರೋಷ್ಠಿ, ಶಫರಿ Mr. 409). ಮಡ್ಡು ರಮೆಪ್ಪು ಆಱುದಾಡೆಯ ಹೆಣ್ಣುಮೀನು. (ಶೃಂಗಿ Nr.). — ಹೆಣ್ಣುಮೇಕೆ. a she-goat (My.). — ಹೆಣ್ಣುವೇಷ. the apparel or guise of a woman (My.; Si. 64). — ಹೆಣ್ಣುಸಿಂಹ. a lioness (B. 4, 212). — ಹೆಣ್ಣುಸಿಹ್ವ. = ಹೆಣ್ಣುಸಿಂಹ. (B. 5, 242). — ಹೆಣ್ಣು ಸೋಗು. = ಹೆಣ್ಣುವೇಷ. ಹೆಣ್ಣು ಸೋಗ ಹಾಕಿ ಕೊಣ್ಣು ಕುಣಿಯುವ ಪುರುಷನು (ಶೈಲಾಲಿ G.). — ಹೆಣ್ಣುಹನ್ನಿ. a sow (My.). — ಹೆಣ್ಣುಹುಡುಗ. a girl (B. 5, 276). ಹೆಣ್ಣುಹುಡುಗರು ಆಡುವ ಅಡ್ಡಳ್ಳ (G. 10). — ಹೆಣ್ಣುಹುಲಿ. a tigress (C.; B. 4, 37). — ಹೆಣ್ಣುಹುಲ್ಲೆ. a spotted doe (My.; Si. 168). — ಹೆಣ್ಣುಹುೞು. a female insect (B. 4, 113).

**ಹೆಣ್ಣುಗ hen-uga.** (Śmd. 240 Mdb.). a pimp.

**ಹೆಣ್ಣುತನ hennutana.** = ಪೆಣ್ತನ. (Bh. 4, 4, 86).

**ಹೆಣ್ದು hendu.** P. p. of ಹೆಣೆ 1. (My.).

**ಹೆತ್- het.** = ಹೆಗ್–, etc., ಹೆದ್–. — ಹೆತ್ತಪ್ಪ. -ಅಪ್ಪ. a grandfather (My.). — ಹೆತ್ತಮ್ಮ. -ಅಮ್ಮ. a grandmother (My.). — ಹೆತ್ತಯ್ಯ. -ಅಯ್ಯ. a grandfather (Bp. 32, 19). ಹೆತ್ತಯ್ಯಗೆ ಅಱುಯದವ ಮುತ್ತಯ್ಯಗೆ ಬಲ್ಲನೇ? (Prv.). — ಹೆತ್ತವ್ವೆ. -ಅವ್ವೆ. = ಹೆತ್ತಮ್ಮ. (My.). — ಹೆತ್ತಾತ. -ತಾತ. = ಹೆತ್ತಪ್ಪ. (My.).—ಹೆತ್ತೇಗು. -ತೇಗು. the timber tree Nauclea cordifolia Roxb. (Z.).

**ಹೆತ್ತು hettu. 1.** P. p. of ಹೆಱ್ (ಹೆಱು) 1.

**ಹೆತ್ತು hettu. 2.** P. p. of ಹೆಱ್ (ಹೆಱು) 2.

**ಹೆದ್ hed.** = ಪೆರ್ 1-, etc., ಹೆತ್–, etc. — ಹೆದ್ದಟ್ಟು. -ತಟ್ಟು 3. gross, superficial flatness. ಆ ಮರವನ್ನು ಹೆದ್ದಟ್ಟು ಕೆತ್ತು (My.). 2, superficiality (in ಹೆದ್ದಟ್ಟುಕೆಲಸ, My.). — ಹೆದ್ದನಿ. a loud voice (Bp. 51, 54; My.). — ಹೆದ್ದರೆ. an extensive barren tract (My.). — ಹೆದ್ದಾರಿ. a great road, a high-road (ನಿಗಮ, ಪೆರ್ಬಟ್ಟೆ Nn. 40, o. r. ಹೆಬ್ಬಟ್ಟೆ; My.). ಉದ್ದು ಉರುಳಿದರೆ ಹೆದ್ದಾರಿ ದಾಟೀತೇ? (Prv.). 2, either head of two parties (My.). — ಹೆದ್ದಿಣ್ಣಿ. -ತಿಣ್ಣಿ. much or excessive food (My.). — ಹೆದ್ದೀನಿ. -ತೀನಿ. = ಹೆದ್ದಿಣ್ಣಿ. (My.). 2, one who eats all kinds of food or is omnivorous (ಸರ್ವಾನ್ನೀನ, ಸರ್ವಭಕ್ಷಕ Hlā.). — ಹೆದ್ದುಮ್ಬಿ. -ತುಮ್ಬಿ. a very large black bee (My.). — ಹೆದ್ದುಮ್ಬೆ. -ತುಮ್ಬೆ. a large tumbe plant (My.). — ಹೆದ್ದೆರೆ. -ತೆರೆ. a great wave, a billow (ಊರ್ಮಿ, ಉತ್ಕಲಿಕೆ, ಉಲ್ಲೋಲ, ಕಲ್ಲೋಲ, ಲಹರಿ Hlā.; ಉಲ್ಲೋಲ, ಕಲ್ಲೋಲ Nr.). — ಹೆದ್ದಲೆ. -ತಲೆ. a large or principal head (Bp. 38, 59; 54, 6). — ಹೆದ್ದೊಡೆ. -ತೊಡೆ. = ಪೆರ್ದೊಡೆ. the thigh (ಊರು, ಸಕ್ಥಿ Hlā.; ಊರು Nr.; Bh. 3, 13, 33). — ಹೆದ್ದೊಱೆ. -ತೊಱೆ. = ಪೆರ್ದೊಱೆ. a large stream or river [ಹರನೀವ ಕಾಲಕ್ಕೆ ಸಿರಿಯು ಬೆನ್ನಲಿ ಬರ್ಕು, ಹರಿದು ಹೆದ್ದೊಱೆಯ ಕೆಱೆತುಮ್ಬಿದನ್ತಯ್ಯಾ! Bv. 169]; (Bp. 32, 32; 60, 46; Rām. 5, 8, 75).

**ಹೆದಱಿಕೆ hedarike.** fear (C.; B. 3, 57. 85; 4, 18. 181; 5, 205).

**ಹೆದಱಿಸು hedarisu.** to frighten, to intimidate (C.; B. 4, 199). ಕಮ್ಬಳಿಯವನ ಹೊಡದು, ಹಚ್ಚಡದವನ ಹೆದಱಿಸ ಬೇಕು (Prv.).

**ಹೆದಱು hedaru. 1.** (= ಬೆದಱ್ 1). to be alarmed or frightened, to fear (ಅಂಜು Śmd. 296 Cm.; Bp. 16, 1; 18, 46; 22, 1; 28, 55; 32, 26; 36, 1; 39, 35; 54, 38. 52; J. 16, 47; Bh. 1, 8, 2; C.; B. 3, 51). ಹೆದಱಿದವನು (ಕ್ಲೀಬ, ಆತಂಕಶರೀರ Nn. 146). ಹೆದಱುವವನು (ತ್ರಸ್ನು, ಭೀರು, ಭೀರುಕ, ಭೀಲುಕ Si. 360). ನರಹತ್ಯಕ್ಕೆ ಹೆದಱದವ ಕುಱೀ ಹತ್ಯಕ್ಕೆ ಹೆದಱ್ಯಾನೇ? — ಪ್ರಲಯಕ್ಕೆ ಹೆದಱದವ ಪಾಳ್ಯಕ್ಕೆ ಹೆದಱ್ಯಾನೇ? — ಮುಱಿಗೆ ಹೆದಱಿ, ಹೊಱೇಲಿ ಹಾಱಿದ ಹಾಗೆ. — ಮೂಸಿದ್ದಕ್ಕೆ ಹೆದಱದವಳು ಮುಸರೆಗೆ ಹೆದಱ್ಯಾಳೇ? — ಸಾವಿಗಂಜದವನು ನೋವಿಗೆ ಹೆದಱ್ಯಾನೇ? — ಸೆಳೆಗೆ ಹೆದಱದ ಮಗು ಬಳೆಗೆ ಹೆದಱೀತೇ? — ಸಣಸುವವನಾದರೆ ಹೆಣ ನೋಡಿ ಹೆದಱ್ಯಾನೇ? (Prvs.).

**ಹೆದಱು hedaru. 2.** (= ಬೆದಱ್ 2). alarm, fright, fear (J. 2, 59). — ಹೆದಱೆದೆ. -ಎದೆ. a timid heart (Bh. 3, 13, 38).

**ಹೆದೆ hede.** = ಎದೆ 2, ಪೆದೆ. a bow-string (ತಿರು, ತಿರ್ಪು, ಬಿಲ್ಲನಾರಿ Śm. 43; ಮೌರ್ವಿ, ಜ್ಯಾ, ಸಿಂಜಿನಿ, ಗುಣ Si. 288; Bp. 61, 25; J. 12, 41; 16, 14; 20, 14; Bh. 3, 13, 21). ಬಿಲ್ಲ ಹೆದೆ (ಜೀವ, ಮೌರ್ವಿ Nn. 73; ದಶ, ಮೌರ್ವಿ 27; ಗುಣ, ಮೌರ್ವಿ 78; ಸಿಂಜಿನಿ Mr. 294).

**ಹೆದೆಯ hedeya.** Tbh. of ಹೃದಯ (Śmd. 353; ಎದ್ದೆ, ಹೃದಯ Śs.).

**ಹೆದ್ದ hedda.** = ಹೆದ್ದನ. a long and stout lever applied to the hind wheels of an idol-car in order to move it forwards (My.).

**ಹೆದ್ದನ heddana.** = ಹೆದ್ದ. (My.).

**ಹೆನ್ hen.** = ಪೆನು, ಪೆರ್ 1, etc. — ಹೆನ್ನರ. a principal artery (ಕಣ್ಡರೆ Mr. 298). ಕೊರಳ ಹೆನ್ನರ (ಕಣ್ಡರೆ Hlā.).

**ಹೆನ್ದ henda.** = ಪೆದ್ದ. largeness, etc. (Bp. 23, 33).

**ಹೆನ್ದು hendu.** = ಹನ್ದು. to move (v. i.), to shake; to draw back (v. i., Bp. 29, 15; 38, 19; 41, 26; 44, 18; 50, 23; 54, 14; 56, 48; 59, 42).

**ಹೆಪ್ಪು heppu. 1.** = ಹೆಱ್ (ಹೆಱು) 2. to thicken, etc. (Si. 314; *only* in Si.).

**ಹೆಪ್ಪು heppu. 2.** (fr. ಹೆಱ್ 2). (Śmd. 191). a flux that is put into another to alter its form or state, especially into boiled milk to cause it to turn or curdle (for which purpose either curds or buttermilk of a previous day is used, My.; ಆಮಿಕ್ಷೆ Hlā.; C.). ಕಣ್ಣುಗ ಹಾಲಿಗೆ ಒನ್ದೇ ಬೊಟ್ಟು ಹೆಪ್ಪು. — ತೊಪ್ಪೆ ಬರುವದೇ ಹೆಪ್ಪಿಗೆ? (Prvs.). see Sp. s. ಅಳೆ 3. ಕಾಯ್ದ ಹಾಲೊಳಗೆ ಮೊಸರು ಹಾಕಿ ಮಾಡಿದ ಹೆಪ್ಪು (ಆಮಿಕ್ಷೆ G.). — ಹೆಪ್ಪಾಗು. -ಆಗು. to be turned, as milk (My.); to congeal. — ಹೆಪ್ಪಿಡು. -ಇಡು. = ಹೆಪ್ಪು ಹಾಕು. (My.). — ಹೆಪ್ಪಿಡುವಿಕೆ. -ಇಡುವಿಕೆ. throwing one flux into another to alter its form or state (ಆತಂಚನ, ಪ್ರತೀವಾಪ Si. 436). — ಹೆಪ್ಪು ಕಟ್ಟು. = ಹೆಪ್ಪಾಗು. ಕಾಯಿಸಲ್ಪಟ್ಟು ಬಿಸಿಯಾದ ಹಾಲಿನಲ್ಲಿ ಮೊಸರು ಸೇರಿ ಹೆಪ್ಪು ಕಟ್ಟಿ ಒಡದನ್ತೆ ಸಪ್ಪೆಯಾಗಿರುವದು (ಆಮಿಕ್ಷೆ Si. 240). — ಹೆಪ್ಪು ಕೊಡು. to add one flux to another to alter its form or state. ಹೆಪ್ಪು ಕೊಡುಹಂ (ಆತಂಚನ, ಪ್ರತೀ ವಾಪ Nr.). — ಹೆಪ್ಪುಗೊಳ್ಳು. -ಕೊಳ್ಳು. to congeal (B. 2, 49). — ಹೆಪ್ಪು ಹಾಕು. to put in a flux to curdle or turn boiled milk (C.; B. 1, 15). ಹೆಪ್ಪು ಹಾಕಲಿಕ್ಕೆ ತಿಳಿಯದವಳು ಮೊಸರು ಕಡದಾಳೇ? — ಓಡಿ ಹೋಗುವ ಬಡ್ಡಿ ಹಾಲಿಗೆ ಹೆಪ್ಪು ಹಾಕ್ಯಾಳೇ? (Prvs.). ಹಾಲಿಗೆ ಹೆಪ್ಪು ಹಾಕೋಣ (ಆತಂಚನ G.).

**ಹೆಪ್ಪು heppu. 3.** sod, sward, grass turf (My.).

**ಹೆಬ್- heb.** = ಪೆರ್ 1-, etc. — ಹೆಬ್ಬಚ್ಚು. -ಅಚ್ಚು. a large mould or type (Bp. 40, 61). — ಹೆಬ್ಬಟ್ಟೆ. a high-road (ನಿಗಮ, ಪೆರ್ಬಟ್ಟೆ Nn. 40, o. r. ಹೆದ್ದಾರಿ). — ಹೆಬ್ಬನ್ದಿ. -ಹನ್ದಿ. = ಪೆರ್ವನ್ದಿ. a large hog (Rām. 3, 3, 20. 22; Bh. 3, 13, 31). [ಬ್ರಹ್ಮ ವಿಷ್ಣ್ವಾದಿಗಳು ಬ್ರ

ಹ್ಮಾಹಂ ಎನ್ದು ಕೆಮ್ಮನೆ ಕೆಟ್ಟು ಹದ್ದು ಹೆಬ್ಬನ್ದಿಗಳಾದುದನಱಿಯಿರೆ? Cv. 444]. — ಹೆಬ್ಬರಿಸಿನ. -ಅರಿಸಿನ. (ಪೀತದ್ರು, ಕಾಲೇಯಕ, ಹರಿದ್ರುವ, etc. Si. 146). — ಹೆಬ್ಬಱೆ. -ಪಱೆ. a large drum (Bp. 56, 14; Rām. 6, 26, 23; 6, 44, 51; 6, 45, 61; My.). — ಹೆಬ್ಬಲ್. -ಹಲ್. a large tooth (J. 28, 46). — ಹೆಬ್ಬಲ. = ಪೆರ್ಬಲ. a large force or army (Bh. 1, 8, 6; 6, 2, 6; Rām. 4, 3, 1). — ಹೆಬ್ಬಲಸು. -ಹಲಸು. the jungle jack-tree and its fruit, Artocarpus pubescens Willd. (St. & Pl.; My.). — ಹೆಬ್ಬಾಗಲು. -ಹೆಬ್ಬಾಗಿಲ್. see Prv. s. ನಡು ವಿರುಳು. — ಹೆಬ್ಬಾಗಿಲ್. ಹೆಬ್ಬಾಗಿಲು. = ಪೆರ್ಬಾಗಿಲ್. a large gate or door, the principal gate or door (ಪುರದ ಗೋಪುರ Hlā.). ಹೆಬ್ಬಾಗಿಲ ಮುನ್ತು (ಮುಖ, ನಿಃಸರಣ Hlā.). ಹೆಬ್ಬಾಗಿಲ ಇಕ್ಕೆಲದಲುಂ ಒಳಗಣ ಮೆಯ್ಯೊಳಂ ಸೋಪಾನಂ ಬೆರಸಿ ಮಾಡಿದ ಮಣ್ಣರಾಶಿ (ಹಸ್ತಿನಖ Nr.). ಕಿಟಕಿಯಿನ್ದ ನುಸುಳುವವ ಹೆಬ್ಬಾಗಿಲಿನ್ದ ಬಾರನೇ? (Prv.). — ಹೆಬ್ಬಾರ. -ಹಾರ. the head Brāhmaṇa of a caste (My.). 2, one of a class of vaiṣṇava Brāhmaṇas (My.). see ಹಿಡಿ. — ಹೆಬ್ಬಾರವ. -ಹಾರವ. = ಹೆಬ್ಬಾರ No. 2. (My.). — ಹೆಬ್ಬಾರುವ. -ಹಾರುವ. = ಹೆಬ್ಬಾರವ. (My.). — ಹೆಬ್ಬಾರೆ. (-ಬಾರೆ = ಭಾರ?). — ಹೆಬ್ಬಾರೆ ಹುಲಿ. (ಶಾರ್ದೂಲ, ದ್ವೀಪಿ, ವ್ಯಾಘ್ರ, ದೊಡ್ಡ ಹುಲಿ Si. 167). — ಹೆಬ್ಬಾಱೆ. vulgar form of ಹೆಬ್ಬಱೆ (My.). — ಹೆಬ್ಬಾವಲ್. a bat (ಜತುಕೆ, ಅಜಿನಪತ್ರೆ Nr. *b*). — ಹೆಬ್ಬಾವು. -ಹಾವು. = ಪೆರ್ಬಾವು. a large snake; the boa, Python reticulatus (Bḍ.; ತಿಲಿತ್ಸ, ಗೋನಾಸ, ವಾಹಸ, ಅಜಗರ, ಶಯು Hlā.; ಅಜಗರ, ಶಯು, ವಾಹಸ Nr.; ಗೋನಾಸ, ತಿಲಿತ್ಸ, ಶಯು, ವಾಹಸ, ದಾಸರಿಹಾವು Si. 77; C.; B. 2, 26). — ಹೆಬ್ಬಾವುಲ್. = ಹೆಬ್ಬಾವಲ್. (Nr. *a*). — ಹೆಬ್ಬಾಳ್. -ಆಳ್. a superior man, etc. (ಮಹೋತ್ಸಾಹ, ಮಹೋದ್ಯಮ, ಮಹೋಚ್ಛ್ರಯ, ಮಹಾಮನಸ್ Hlā.). — ಹೆಬ್ಬಿದಿರ್. ಹೆಬ್ಬಿದಿರು. = ಪೆರ್ಬಿದಿರ್. a tall and thick bamboo (Bh. 1, 20, 57; My.). — ಹೆಬ್ಬುಡ. an extensive bottom (Rām. 6, 10, 28). — ಹೆಬ್ಬುರುಲಿ. the common Indian grey quail (Bḍ.; Pr.). — ಹೆಬ್ಬುಲಿ. -ಹುಲಿ. = ಪೆರ್ಬುಲಿ. a large, or royal, tiger (Rāghc. 17, 74; Dp. 61, 4; C.; B. 5, 245). ನಾನು ಹುಲಿ ಆದರೆ ನನ್ನ ಅಣ್ಣ ಹೆಬ್ಬುಲಿ (Prv.). ಒಕ್ಕಲಿಗನೋದಲ್ಲ (*i. e.* ಒಕ್ಕಲಿಗನ ಓದು ಅಲ್ಲದ್ದು), ಬೆಕ್ಕು ಹೆಬ್ಬುಲಿಯಲ್ಲ, ಎಕ್ಕೆಯ ಗಿಡವು ಬನವಲ್ಲ; ಇವು ಮೂಱು ಲೆಕ್ಕದೊಳಗಲ್ಲ (Sp.). — ಹೆಬ್ಬೆಟ್ಟ. = ಪೆರ್ಬೆಟ್ಟ. a great mountain (J. 6, 17; 23, 21). — ಹೆಬ್ಬೆಟ್ಟು. the thumb; the great toe (My.; Si. 211). — ಹೆಬ್ಬೆರಳು. = ಹೆಬ್ಬೆಟ್ಟು. (ಅಂಗುಷ್ಠ G.; Si. 211; C.). — ಹೆಬ್ಬೆಱಗು. great astonishment (Bp. 61, 28). — ಹೆಬ್ಬೆಸಱು. (?ನದ್ಧ್ರ, ವದ್ಧ್ರ Hlā.). — ಹೆಬ್ಬೆಳಸು. a large crop (Bh. 6, 8, 13). — ಹೆಬ್ಬೇವು. a kind of bēvu timber-tree (My.). — ಹೆಬ್ಬೊಗೆ. -ಹೊಗೆ. = ಪೆರ್ಬೊಗೆ. excessive, dense smoke (Bp. 44, 21). — ಹೆಬ್ಬೊಟ್ಟು. = ಹೆಬ್ಬೆಟ್ಟು. (C.; B. 3, 44). ಹೆಬ್ಬೊಟ್ಟಿನ ಒತ್ತಿನ ಬೆರಳು (ತರ್ಜನಿ, ಪ್ರದೇಶಿನಿ); ಅಂಗುಷ್ಠತರ್ಜನ್ಯಾದಿಗಳೊಡನೆ ಕೂಡಿ ಅಳದರೆ ಕ್ರಮದಿನ್ದ ಪ್ರಾದೇಶಾದಿಸಂಜ್ಞೆಗಳಕ್ಕು, ಹೆಬ್ಬೊಟ್ಟು ಸುಟ್ಟುವೆಬ್ಬು ಕೂಡಿ ಅಳದರೆ ಪ್ರಾದೇಶ ಎನಿಸುಗು, ಆ ಹೆಬ್ಬೊಟ್ಟೊ ನಡುವಣ ಬೆರಳೂ ಕೂಡಿ ಅಳದಡೆ ತಾಲ ಎನಿಸುಗುಃ, ಆ ಹೆಬ್ಬೊಟ್ಟು ಅನಾಮಿಕೆ ಕೂಡಿ ಅಳದೊಡೆ ಗೋಕರ್ಣ ಎನಿಸುಗು, ಆ ಹೆಬ್ಬೊಟ್ಟು ಕಿಱುಕುಣಿಕೆಗೂಡಿ ಅಳೆವಲ್ಲಿ ವಿತಸ್ತಿ ಎನಿಸುಗು; ಹೆಬ್ಬೊಟ್ಟಿನ ಮೂಲಂ (ಬ್ರಹ್ಮತೀರ್ಥ Nr.).

**ಹೆಬ್ಬು hebbu.** (= ಹೆಬ್-?). — ಹೆಬ್ಬುಗೆಣಸು. a kind of yam, Dioscorea atropurpurea Roxb. (St. & Pl.).

**ಹೆಮ್- hem. 1.** = ಪೆರ್ 1-, etc. — ಹೆಮ್ಬೇಡಿ. -ಹೇಡಿ. a great coward (J. 17, 54). — ಹೆಮ್ಮರ. = ಪೆರ್ಮರ. a large tree. 2, the tree Calosanthes indica Blum. (ಮಣ್ಡೂಕಪರ್ಣ, ಪತ್ರೋರ್ಣ, ನಟ, ದೀರ್ಘವೃನ್ತ, ಶೋಣಕ, etc. Nr.; Si. 135). 3, a lofty tree furnishing a fragrant resinous gum, Ailanthus malabarica D. C. (St. & Pl.). ಹೆಮ್ಮರನಿರ್ದೇನ್? ಅದಱಿನ್ದಲೆತ್ತಲಹುದೇ ಬಲ್ಭಾರಮಂ? ಸನ್ನೆ ಸಾವಿರ ಕಾಲಾಳಿನ ಸತ್ವವನ್ ಅಯ್! (Śś. 11). ಆಲಥೆಮ್ಮರನನ್ತೆ (*i. e.* ಆಲದ ಹೆ-) ಜೋಲುಜಿಡೆಗಳ ಬಿಟ್ಟು, ನಾಲಿಗೆ ಕೌಪ ಶುದ್ಧಿಯಲ್ಲ; ಮಱಿನಾಯ ಬಾಲದನ್ತಕ್ಕು (Sp.). see Bh. 1, 10, 37; 1, 20, 55; 3, 1, 30; 3, 9, 24; 3, 13, 32; Rām. 6, 10, 28; Prv. s. ಹೆಱವ. — ಹೆಮ್ಮಕ್ಕೆರು. = ಹೆಮ್ಮೆಕ್ಕೆ. (Si. 161). — ಹೆಮ್ಮರದುಱುಗಲ್. -ತುಱುಗಲ್. a mass of hemmaras (Bh. 3, 23, 10). — ಹೆಮ್ಮರೆ. = ಪೆರ್ಮರೆ. a large deer or doe. — ಹೆಮ್ಮರೆವಾಲ್. -ಪಾಲ್. milk of a large doe (Bp. 18, 17). — ಹೆಮ್ಮಾರಿ. a very bad or wicked woman (Dp. 54, 4); Durgā (My.). — ಹೆಮ್ಮಾರಿಮೊಗ. a face like that of Durgā (C. Bp. 47, 14). — ಹೆಮ್ಮೀನ್. -ನು. a large fish; a sort of large fish (ಝುಷ Nr.; ವಾಗು, ಮದ್ಗು, ಶೃಂಗಿ Mr. 409). ಶೃಂಗಿ ಮದ್ಗುರ ವಾಗುಸ ನನ್ದ್ಯಾವರ್ತ ಈ ೪ ಮೊದಲಾಗುಳ್ಳುವು ಹೆಮ್ಮೀನು (Nr.). — ಹೆಮ್ಮುಷ್ಟಿಗೇ ಗಿಡ. (ವತ್ಸಕ, ಶಕ್ರ, ಇನ್ದ್ರಜವಿ G.). — ಹೆಮ್ಮೆಕ್ಕೆ. a sort of cucumber, Cucumis madraspatanus (ಚಿತ್ರೆ, ಗವಾಕ್ಷಿ, ಗೋಡುಮ್ಬೆ Nr.). — ಹೆಮ್ಮೊರಡಿ. a large hillock (Rām. 6, 45, 61).

**ಹೆಮ್- hem. 2.** = ಪೆಣ್, etc. woman. — ಹೆಮ್ಮಕ್ಕಳು. women (Bh. 6, 7, 31).

**ಹೆಮ್ hem. 3.** a certain sound originating in the belly of a horse. — ಹೆಮ್ ಹೆಮ್. rep. (S. Mhr.).

**ಹೆಮ್- hem. 4.** = ಹೊನ್ 1-. — ಹೆಮ್ಮಱಿ. = ಹೊಮ್ಮಱಿ. (Rām. 4, 1, 14). — ಹೆಮ್ಮುಗುಳು. a medicinal garden plant with yellow heads of flowers, Spilanthes acmella Lin., var. oleracea Cl. (Z.; the name is also used for the wild-growing variety, Z.).

**ಹೆಮಿಕೆ hemike.** = ಎಮಿಕೆ 2. a small gold ornament. (My.).

**ಹೆಮ್ಪು hempu.** = ಪೆಮ್ಪು. greatness, etc. (Grj. 2, 106 va.; 3, 69 va.; 7, 14; Bp. 36, 29; 38, 6; 46, 47; 47, 49; 53, 24; 59, 54; 61, 77; Rām. 6, 46, 2; 6, 50, 10). — ಹೆಮ್ಪಳಿ. -ಅಳಿ. grandeur to be lost (Rām. 6, 53, 67). — ಹೆಮ್ಪೇಱು. -ಏಱು. to grow, or begin to appear, grand (Grj. 5, 4).

**ಹೆಮ್ಮೆ hemme.** = ಎಮ್ಮೆ 2, ಪೆರ್ಮೆ, q. v. greatness, etc.; pride, vanity, self-conceit (ಪೆರ್ಮೆ Ct. II, 76; ಪ್ರಭುತೆ Mr. 459; ಲಲಾಮ 498; Bp. 30, 19; 42, 17; J. 32, 47; C. in the sense of "pride"; B. 2, 12. 39; B. 4, 9. 72); elation, joy. ಹಿರಿದಪ್ಪ ಹೆಮ್ಮೆ (ಪ್ರಭುತೆ, ಪ್ರಭವಿಷ್ಣುತೆ Hlā.). ಹೆಮ್ಮೆಯುವನಿಗೆ ಒಮ್ಮಾನಕ್ಕಿಯೂ ದೊರಕದು (Prv.). — ಹೆಮ್ಮಡಿ. -ಅಡಿ. = ಪೆರ್ಮಡಿ. see ಭೂಪಾಲ-. — ಹೆಮ್ಮೆಗೊಳಿಸು. -ಕೊಳಿಸು. to elate, to fill with delight. (ಬಾಲೆ) ಒಮ್ಮೆ ಮಮಕಾರಾವನೀಪನನ್, ಒಮ್ಮೆ ಮೋಹಿನಿದೇವಿಯುಸು, ಮತ್ತೊಮ್ಮೆ ತನ್ನುವನ್ ಆಡಿಸುವ ಕೆಳದಿಯರ ತಣ್ಡವನು ಹೆಮ್ಮೆಗೊಳಿಸುತ, ಸುಖಮುಖವನು ಹೊಱ ಹೊಮ್ಮಿಸುತ (Prll. 3, 30). — ಹೆಮ್ಮೆಸಂಗಯ್ಯ. N. (Bp. 58, 2).

**ಹೆಮ್ಮೆಗಾಱ hemme-gāṟa.** a proud, vain, conceited man (My.).

**ಹೆರಲ್ heral. ಹೆರಲು.** = ಎರಲ್ 2, ಎರಳ್ 2, ಹಿಣಿಲ್ 2, etc. a braid of hair (My.).

**ಹೆರಸು herasu.** to cause to scrape, etc. (My.).

**ಹೆರಳ್ heraḷ. ಹೆರಳು.** = ಹೆರಲ್, etc. (My.). a braid of hair. — ಹೆರಳುಬಂಗಾರ. a gold-ornament resembling a braid of hair and furnished with gejjes, worn over a braid of hair (My.). — ಹೆರಳು ಹಾಕು. to braid the hair (C.; B. 5, 283).

**ಹೆರಳು heraḷu.** a vessel like arrangement to render the musical sound deeper. ವೀಣೆಯ ಹೆರಳು (ಕಕುಭ, ಪ್ರಸೇವಕ); ವೀಣೆಯ ತಸ್ತಿ ಹೆರಳು ಮೊದಲಾದ ಶರೀರ (ಕೋಲಪ್ಪುಕ Si. 63).

**ಹೆರಳೆ heraḷe.** = ಹಿರಳೆ, etc. (My.; Si. 130). — ಹೆರಳೆಕಾಯಿ. (ಕಂಚೀ ಕಾಯಿ G.).

**ಹೆರೆ here. 1.** to scrape, as the surface of a wall, floor, fruit, bamboo-slit, etc. (C. Bp. 53, 20; Dp. 170, 3; My.; see s. ಯಮುಗೊಲೆ); to shave, as the head (My.); to make a pen or pencil (My.); to grub, as grass (My.; *cf.* ಪರಡು 1 & 3). ಹೆರೆಯಲಿಕ್ಕಿಲ್ಲವೆನ್ನು, ಗೋಟಿ ಹೆರದ ಹಾಗೆ (Prv.).

**ಹೆರೆ here. 2.** = ಎರೆ 5, ಪೆರೆ, etc. the slough of a serpent (ನಿರ್ಮೋಕ, etc. Mr. 400; ಕಂಚುಕ, ನಿರ್ಮೋಕ Nr.; C.; B. 2, 27). ಹಾವಿನ ಹೆರೆ (ನಿರ್ಲ್ವಯನಿ, ನಿರ್ಮೋಕ, ಕಂಚುಕ Hlā.; ಮೂಲಿಕ, ನಿರ್ಮೋಕ Nn. 44; ಕವಚ, ಮರ್ಮರ 88). ಉರ್ಚದ ಹೆರೆ (ಉಪಜಿಹ್ವೆ Hlā.). ದೇಹದ ಎಡೆಗಳೆಯದೆ ಇಹ ಹೆರೆ (ಉಪಜಿಹ್ವೆ, ಉಪವೇಹಿಕೆ Mr. 401). ಹೆರೆ ಉಚ್ಚಿದ ಹಾವು (ನಿರ್ಮುಕ್ತ, ಮುಕ್ತಕಂಚುಕ Nr.). ಹೆರೆ ಹೋದ ಉರಗನಾ ಗರಳ ತಾ ತಪ್ಪುವದೆ? ಪರಜ್ಞಾನಬೋಧೆಯೊಳು ಯದಾ ಗುರುಗಳು ಸಿರಿಯ ತೊಱೆದೇನು? (Sp.). ಹೆರೆಗೆ ಹೆದಱುವ ಹಾವಿಗೆ ಹೆದಱನೇ? (Prv.).

**ಹೆರೆ here. 3.** = ಎರೆ 1. black grease for wheels (My.). refined crystals, as of salt. ಉಪ್ಪಿನ ಹೆರೆ (Dp. 170, 2). — ಹೆರೆಗೊಮ್ಬು. -ಕೊಮ್ಬು. a horn or hollow piece of bamboo in which such grease is kept (C.).

**ಹೆರೆಗೆ herege.** — ಹೆರೆಗೆಹಾಲೆ. a kind of medicinal plant. (ಶೃಂಗಿ, ವೃಷಭ, ವೃಷ Si. 150).

**ಹೆಱ್ her. ಹೆಱು. 1.** = ಪೆಱ್ 1. to get, etc.; to bear, to give birth to (ಪ್ರಸವ, ಪ್ರಸೂತ Nn. 120; Bp. 57, 15; C.). P. p. ಹೆತ್ತು. ಹೆತ್ತ ಮನೆ (ಅರಿಷ್ಟಗೃಹ, ಸೂತಿಕಾಭವನ Hlā.). ಹೆತ್ತವಳಿದ್ದ ಮನೆ (ಅರಿಷ್ಟ, ಸೂತಿಕಾಗೃಹ Nr.). [ಮತ್ತೆ ದುರಿತಂಗಳ ಹೆಱುವ ಹೇಗೆ ತನವೇಕಯ್ಯಾ Bv. 159]. ಮಕ್ಕಳನ್ನು ಹೆಱುವವಳು (ಜಾತಾಪತ್ಯೆ, ಪ್ರಜಾತೆ, ಪ್ರಸೂತೆ, ಪ್ರಸೂತಿಕೆ Si. 187). ಹೆತ್ತಾಕೆಯ ಹೊಟ್ಟೆ ಉರಿದರೆ (from sorrow) ನೆರೆಮನೆಯಾಕೆಯ ಒಲೆ ಉರಿಯಿತು. — ಹೆತ್ತವಳಿಗೆ ಹೆಗ್ಗಣ ಮುದ್ದು, ಕೂಡಿದವಳಿಗೆ ಕೋಡಗ ಮುದ್ದು.— ಹೆತ್ತ ತಾಯಿನ ತಿಮ್ಬುವವಳು ಅತ್ತೆಗೆ ಬಿಟ್ಟಾಳೇ? — ಹೆಣ್ಣು ಹೆತ್ತು ತಿಳಿಯ ಬೇಕು, ಗಣ್ಡು ತೆತ್ತು ತಿಳಿಯ ಬೇಕು. — ಹೆಱಲಾಱದವಳು ಹೆತ್ತರೆ ಮನೆಯೆಲ್ಲ ಹೇಲು. — ಪುತ್ರನಿಲ್ಲದಿದ್ದರೆ ಹೆಱಲಿಕ್ಕೆ ಕಡಿಮೆಯೇ? — ಆಱು ಹೆತ್ತವಳಿಗೆ ಮೂಱು ಹೆತ್ತವಳು ಮುಲುಕು ಕಲಿಸಿದಳನ್ತೆ.— ಹೊತ್ತು ಮಿಱಿದರೆ ತೊತ್ತು (*i. e.* ಸೂಳೆ) ಹೆತ್ತವಳಾದಾಳೇ? (Prvs.). — ಹೆತ್ತ ತಾಯಿ. = ಹೆತ್ತಮ್ಮ. (Bp. 61, 34; see Prv. above). — ಹೆತ್ತಮ್ಮ. -ಅಮ್ಮ. the mother who bore one. ಉತ್ತರೆಯು ಬೞಿತರೇ, ಹೆತ್ತಮ್ಮ ತೊಱೆದರೇ, ಸತ್ಯರೂ ತಪ್ಪಿ ನಡೆದರೆ ಲೋಕ ತಾನೆತ್ತ ಸೇರುವದು? (Sp.). — ಹೆತ್ತರು. = ಹೆತ್ತವರು. ಹಲವು ಕಾಲಕೆ (ಶಿಶುವಂ) ಹರಸಿ ಹೆತ್ತರು (Prll. 3, 12). — ಹೆತ್ತನ. -ಅನ. a father (My.). — ಹೆತ್ತವರು. -ಅವರು. parents (C.). ಹೆತ್ತವರಿಗೆ ಮಕ್ಕಳು, ಬಿತ್ತಿದವರಿಗೆ ಬೆಳೆ, ಎತ್ತಿದಕ್ಕನ ಕೆಯ್ ಬಱಿಗೆಯ್. — ಚಿತ್ತದ ಪೆಟ್ಟಿ ಹೆತ್ತವರು ಹೊಡದರೆ ನೋಯದೇ? (Prvs.). — ಹೆತ್ತವಳು. -ಅವಳು. also: the mother who bore one (My.). — ಹೆತ್ತವ್ವೆ. -ಅವ್ವೆ. = ಹೆತ್ತಮ್ಮ. (Bp. 15, 36). — ಹೆತ್ತಾತ. -ಆತ. = ಹೆತ್ತನ. ಹೆತ್ತಾತನ್ ಅರ್ಜುನನು, ಮುತ್ತಯ್ಯ ದೇವೇನ್ದ್ರ, ಮತ್ತೆ ಮಾತುಲನು ಹರಿಯಿರೆಯಭಿಮನ್ಯು ಸತ್ತನೇಕಯ್ಯ? (Sp.).

**ಹೆಱ್ her. ಹೆಱು. 2.** = ಪೆಱ್ 2. to thicken, to congeal, as clarified butter or ghee and curds (C.; Te. ಪೇರು). P. p. ಹೆತ್ತು. ತುಪ್ಪಂ ಹೆಱಲು (ಶೀನ, ಸ್ತ್ಯಾನ Mr. 183). ಹೆತ್ತ ತುಪ್ಪ (ಶೀನ, ಸ್ತ್ಯಾನ Hlā.). ಹೆತ್ತ ಮೊಸರು (My.). — ಹೆತ್ತುಪ್ಪ. = ಹೆತ್ತ ತುಪ್ಪ. congealed ghee. ಬತ್ತಿ ಹೆತ್ತುಪ್ಪವನು ಹತ್ತಿಸಿದ ಫಲವೇನು? ನಿತ್ಯ ನೆಲೆಗೊಳದೆ ಭಜಿಸುತಿರಲಾ ಪೂಜೆ ಹತ್ತಿಗೇಡು (Sp.).

**ಹೆಱ hera. 1.** = ಪೆಱ. another, other (Bp. 40, 24; C.). ಹೆಱರ ವಶದಾತ (ಪರವತ್, ಪರಾಧೀನ, ನಿಘ್ನ, ಪರವಶ, etc.); ಹೆಱರಿಕ್ಕಿದ ಕೂೞನುಮ್ಬ (ಪರಾನ್ನ, ಪರಪಿಣ್ಡಾದ); ಇರ್ದ ಎಡೆಯಲಿರ್ದು ಹೆಱಗೆ ಮುನಿವವಂ (ಗೋಷ್ಠಶ್ವ Hlā.). ಹೆಱರಿನ್ದ ಮೇಲೆಮ್ಬಂ (ಅಹಂಕಾರಿ Mr. 230); ಹೆಱರ್ ಆರಿಕ್ಕಿದುದ ತಿಮ್ಬವಂ (ಪರಾನ್ನ, ಪರೈಧಿತ, ಪರಪಿಣ್ಡ 231). ಹೆಱರ ಬುತ್ತಿಗೆ ಉಳ್ಳಿಗಡ್ಡೆ ಸುಲಿದನ್ತೆ. — ಹೆಱರ ಬಾಯಲ್ಲಿಕ್ಕುವದ ತನ್ನವರ ಕಣ್ಣಲಿಕ್ಕಿದನ್ತೆ (Prvs.). — ಹೆಱವರು. -ಅವರು. others (C.; B. 3, 7. 37. 105).

***ಹೆಱ hera. 2.** = ಹೆಱ³ 1. — ಹೆಱತೊಲಗು. to go back, to retreat. ಆಗವು ಹೆಱತೊಲಗಿ ಅಗಲಿ ಇದ್ದಿತಯ್ಯಾ Bv. 749.

**ಹೆಱಗು heragu.** = ಹೊಱಗು, etc. other side; out side (My.; *cf.* ಹೆಱ³ 1).

**ಹೆಱಿಗೆ herige.** bringing forth, delivery (used only of women, My.; not of animals, as Si. 322 does). — ಹೆಱಿಗೆಕಾಲ. (a woman's) time of delivery (My.). — ಹೆಱಿಗೆತಿಂಗಳು. the last month of gestation (ಸೂತಿಮಾಸ, ವೈಜನನ Si. 146). — ಹೆಱಿಗೆಮನೆ. a lying-in chamber (My.).

**ಹೆಱು heru.** bringing forth (?). — ಹೆಱುಪ್ಪಳೆ. -ಒ-. (Śmd. 204). a ring that is worshipped in the room of delivery in order to accelerate it (?).

**ಹೆಱುವಿಕೆ heruvike.** bringing forth (ಪ್ರಸೂತಿ, ಪ್ರಸವ Si. 390; ಗರ್ಭಮೋಚನ 458).

**ಹೆಱುಹ heruha.** bringing forth (ಪ್ರಸೂತಿ, ಪ್ರಸವ Nr.).

**ಹೆಱ³ here. 1.** = ಹೆಡ, etc. the state of being back; backwards. — ಹೆಱ³ದೆಗೆ. -ತೆಗೆ. to go or come back, to retreat (Bh. 7, 5, 44; Rām. 4, 6, 10; J. 22, 40). — ಹೆಱ³ಸಾರ್. = ಹೆಱ³ದೆಗೆ. (Bh. 8, 25, 18). — ಹೆಱ³ ಹಿಂಗು. = ಹೆಱ³ ದೆಗೆ. [ಶಮ್ಭು ನಿಮ್ಮಯ ನೋಟ ಹೆಱ³ಹಿಂಗದ ಕಣ್ ಬೇಟ Bv. 177; Cv. 138]; (Bp. 33, 8; J. 18, 31).

**ಹೆಱ³ here. 2.** = ಪೆಱ³. the crescent; the moon (Cpr. 9, 88). — ಹೆಱ³ಗಾಣು. -ಕಾಣು. to see the moon (Rām. 1, 15, 43). — ಹೆಱ³ದಲೆಯವ. -ತಲೆಯವ. = ಪೆಱ³ದಲೆಯ. (Bp. 28, 26). — ಹೆಱ³ಯಮ್ಬ. -ಅಮ್ಬ. = ಪೆಱ³ಯಮ್ಬ. (ಅರ್ಧ ಚನ್ದ್ರ Hlā.).

**ಹೆರ್- her.** = ಪೆರ್ 1-, etc. — ಹೆಬೋಗೆ. -ಹೊಗೆ. = ಪೆಬೋಗೆ. excessive, dense smoke, a mass of smoke (ಧೂಮ್ಯೆ, ಧೂಮ ಸಂಹತಿ Hlā.).

**ಹೆಲ್ಲಣೆ hellaṇe.** (= ಪೊಲ್ಲಣ). badness, etc. (ನಿಟ್ಟುರ, ನಿಷ್ಠೂರ Ss.). see Kk. 57 s. ನಿಟ್ಟುರ.

**ಹೆಸರಣೆ hesaraṇe.** Tbh. of ಪ್ರಸಾರಣೆ. the creeping plant Paederia foetida Lin. (ಸರಣೆ, ಪ್ರಸಾರಣೆ, ಕಟಮ್ಬರೆ, etc. Nr.).

**ಹೆಸರಿಸು hesarisu.** = ಪೆಸರಿಸು. to name, etc. (Bh. 2, 13, 49).

**ಹೆಸರು hesaru. ಹೆಸರ್.** = ಪೆಸರ್ q. v., etc. a name, etc. (ಗೋತ್ರ, ನಾಮ Nn. 16; ಸಂಜ್ಞೆ, ನಿಜನಾಮ 99; ಸಮಾಹ್ವಯ, ಸಂಜ್ಞೆ 159; ನಾಮ 162; ಆಹ್ವಯ, ಆಖ್ಯೆ, ಆಹ್ವೆ, ಅಭಿಧಾನ, ನಾಮಧೇಯ, ನಾಮ Si. 55; ಸಂವಿದ್ 430; ಪ್ರಾದುಸ್ 470; Bh. 3, 13, 21; J. 13, 7; C.;

B. 5, 64). ಇಂಗಿನೆಲೆಯ ಹೆಸರು ಕಾರವಿ ಬಾಸ್ಪಿಕೆ; ಬಡಗಿ ಅಕ್ಕಸಾಲೆ ಕಮ್ಮಾಱ ಕಲುಕುಟಿಗ ಕಂಚಗಾಱನೆನ್ಬ ಅಯ್ವರ ಹೆಸರು ಕಾರು ಶಿಲ್ಪಿ (Nr.). ಪಾದ ದೇವ ಭಟ್ಟಾರಕ ಈ ಮೂಱುಂ ಹೆಸರ ಕಡೆಯೊಳು ಪೂಜಾವಚನ (Hlā.). ಪಾತಕನ ಹೆಸರೆ ಮೂಱು ಲೋಕದೊಳಗೆ ಯಾತಕ್ಕು ಬೇಡ! (Sp.). ಹೆಸರು ಕ್ಷೀರಸಾಗರಭಟ್ಟ, ಮಜ್ಜಿಗೇ ನೀರಿಗೆ ತತ್ವಾರ (Prv.). ಹೆಸರ್ಲೆ (G. 332; My. as ಹೆಸರಲೆ). — ಹೆಸರಾಗು. -ಅಗು. to become noted or famous (C.; B. 2, 10; 4, 28. 30). — ಹೆಸರಿಕ್ಕು. -ಇಕ್ಕು. = ಹೆಸರಿಡು. (My.). — ಹೆಸರಿಗೆ ಬರು. = ಹೆಸರಾಗು. (C.; B. 2, 25). — ಹೆಸರಿಗೆ ಮಾತ್ರ. in name only (C.; B. 5, 64). — ಹೆಸರಿಡು. -ಇಡು. to put or give a name, to name (C.). ಅತಿಸನ್ತಸದೊಳ್ ಅತ್ಮಜೆಗೆ ಅಖಿಲವಿಭವದಿ ಹೆಸರನಿಟ್ಟನು, ಮಾಯೆಯೆಮ್ಬ ನವೀನ ನಾಮವನು (Prll. 3, 24). ದಾಸಿಯನ್ನು ಕರೆಯುವಾಗ, ಹಂಜೆಯೆನ್ದು, ಹೆಸರಿಡ ಬೇಕು (Si. 66). ಆ ತಿಂಗಳುಗಳಿಗೆ ಆ ನಕ್ಷತ್ರಗಳ ಹೆಸರುಗಳು ಇಡಲ್ ಪಟ್ಟಿವೆ (B. 5, 308). — ಹೆಸರು ಕಟ್ಟು. = ಹೆಸರಿಡು. (My.). ದ್ವೇಷದಿನ್ದ ಅನಿಷ್ಟವಾದ ಹೆಸರು ಕಟ್ಟಲ್ ಪಟ್ಟನು (ಬ್ರಹ್ಮಬನ್ಧು, ಕರ್ಮಶೂನ್ಯನಾದ ಬ್ರಾಹ್ಮಣ Si. 433). — ಹೆಸರುಗೊಳ್. -ಕೊಳ್. -ಗೊಳ್ಳು. to get a name, to become famous or celebrated (Bp. 53, 39; My.). — ಹೆಸರು ಪಡೆ. = ಹೆಸರುವಡೆ. (My.). — ಹೆಸರು ಬೀಱು. a name to accrue to or be obtained (C.). ಈ ಹೆಸರು ಬೀಱಲಿಕ್ಕೆ ಕಾರಣವೇನಾಯಿತೆನ್ದರೆ (B. 4, 30). — ಹೆಸರುವಡೆ -ಪಡೆ. to get a name; to become known, celebrated or praised (Bh. 1, 8, 48). — ಹೆಸರುವಾಸಿ. a good condition of name: fame, notoriety, reputation (My.; ಯಶಸ್, ಕೀರ್ತಿ, ಸುಮಜ್ಞೆ Si. 56; ಪ್ರಥೆ, ಖ್ಯಾತಿ 389). — ಹೆಚ್ಚಾದ ಹೆಸರುವಾಸಿ (ವಿಶ್ರಾವ, ಪ್ರತಿಖ್ಯಾತಿ 397). — ಹೆಸರು ಹೊನ್ದು. to get a name, to become noted or famous (C.; B. 4, 220). 2, to get the name of, to be called (My.). — ಹೆಸರು ಹೋಗು. a name to go or disappear (Bp. 36, 34; My.). 3, fame to spread about: to become noted or famous (My.).

**ಹೆಸಱ್ hesar̤. ಹೆಸಱು.** = ಪೆಸಱ್, q. v. green gram (ಮುದ್ಗ Nr.; Mr. 374; C.). ಹೆಸಱು ಬೆಳೆವ ಕೆಯಿ (ಮೌದ್ಗೀನ); ಕಾಡ ಹೆಸಱು (ಮುದ್ಗಪರ್ಣಿ, ಕಾಕಮುದ್ಗೆ, ಸಹೆ Nr.). ಹೆಸಱ ಕೆಯಿ (ಮೌದ್ಗೀನ Hlā.). ಹೆಸಱಕೆಯ್ (ಮೌದ್ಗೀನ Mr. 93). ಪುಱ್ಱುಯೆನ್ಬ, ಉದ್ದು ಕಡಲೆ ತೊವರಿಗೋದುವೆ ಹೆಸಱು ಮೊದಲಾದುವನಿಕ್ಕಿ ಅಟ್ಟ ಕೂೞ್ (Śmd. I). see ಕಾಡ-. — ಹೆಸಱುಕಾಱು. green gram. see Prv. s. ಮುಣ್ಡ ಮೋಚು. — ಹೆಸಱುಗಿಡ. the hesar̤u plant (My.). — ಹೆಸಱುಬೇಳೆ. split green gram (My.).

**ಹೆಳಲು heḷalu.** = ಹಿಣಿಲ್ 2, etc. a braid of hair (C.). — ಹೆಳಲುಬಂಗಾರ. = ಹೆರಳುಬಂಗಾರ. (My.). — ಹೆಳಲು ಹಾಕು. = ಹೆರಳು ಹಾಕು. (C.; B. 1, 6).

**ಹೆಳ್ಗೆ heḷge.** = ಹಿಳ್ಗೆ, etc., ಹೆಡಗೆ, etc. a basket: a snake-basket (ಹಾವುವೆಡಗೆ Ct. I, 45, o. rs. ಹಿಳ್ಗೆ, ಹೇಳ್ಗೆ).

**ಹೆಳ್ಳೆ heḷḷe.** a lump of earth, a clod (ಹೆಟ್ಟ, ಹೆಣ್ಟೆ G.).

**ಹೆೞವ heḻava.** = ಪೆೞವ. a lame man, a cripple (ಖಂಜ, ಪಂಗು, ಶ್ರೋಣ Hlā., Mr. 388; ಶ್ರೋಣ, ಪಂಗು Nr.; Bp. 42, 2; J. 17, 43; C.; B. 5, 278). ಕೆಯ್ಯಿಲ್ಲದ ಹೆೞವನು (ಕುರಕ, ಕುಣಿ Si. 198). ಹೆೞವನಿಗೆ ಭಾಗೀರಥಿಯೋ? ಕಳುವವಗೆ ಅರಮನೆಯೋ? — ಹೆೞವ ಹೆಮ್ಮರದ ಹಣ್ಣು ಬಯುಸಿದರೆ ಗಾಳಿ ಗುದ್ದಿ, ಮೆಯ್ ನೋಯಿಸಿ ಕೊಣ್ಡ (Prvs.).

**ಹೆೞವಿ heḻavi.** = ಪೆೞವಿ. a lame, crippled woman (My.).

**ಹೆೞವು heḻavu.** the state of being lame or crippled (My.).

**ಹೆೞೆ heḻe.** (fr. ಹಿೞ್). = ಹೆೞವು. — ಹೆೞೆಗಾಲ. -ಕಾಲ್-ಅ 3. a man who cannot use his feet. ಹೆೞಗಾಲಂ (Śmd. 95, o. r. in Mdb. ಹಿೞ-). — ಹೆೞೆಗಾಲಿ. -ಕಾಲಿ. a woman who cannot use her feet. ಹೆೞೆಗಾಲಿ (Śmd. 198, o. r. in Mdb. ಹಿೞ-).

**ಹೇ hē.** = ಪೇ 1. madness, etc.

**ಹೇ hē.** *a vocative particle: oh! ho!* a particle of respectful calling (Mhr.); a particle used in vociferating or challenging: hallo! ho there! an interjection expressing envy or ill-will or disapprobation.

**ಹೇಕರಿಸು hē-karisu.** ಹ್ರೇಕರಿಸು. to neigh (as a horse, B. 3, 56. 57; 5, 13).

**ಹೇಕುೞಿ hē-kuḻi.** = ಪೇಂಕುೞಿ q. v., etc. madness, etc. ಹೇಕುೞಿಯುದು (ಅಲರ್ಕ Mr. 185). — ಹೇಕುೞಿಗೊಳ್. to become mad. ಮದ್ದಿನ್ದ ಮರುಳಾಗಿ ಹೇಕುೞಿಗೊಣ್ಡದ್ದ ನಾಯಿ (ಅಲರ್ಕ, ಯೋಗಿತ Nr.).

**ಹೇಗ hēga.** a mad, foolish man (Bp. 51, 19, 52).

***ಹೇಗತನ hēgatana.** foolishness, madness. ಮತ್ತೆ ದುರಿತಂಗಳ ಹೆಱುವ ಹೇಗತನವೇಕಯ್ಯಾ Bv. 159.

**ಹೇಗೆ hēge.** = ಎಹಗೆ, etc. how? (Bp. 19, 32; 20, 26; 22, 54; 49, 12).

**ಹೇಂಗೆ hēṅge.** = ಹೇಗೆ, etc. (Bp. 25, 22).

**ಹೇಟು hēṭu.** = ಏಟು 1. a blow (My.).

**ಹೇಟೆ hēṭe.** = ಹೇಣ್ಟೆ, ಹ್ಯಾಟೆ. a hen (of fowls, My.; T. ಪೇಡು, ಪೇಡ್ಡೆ; see s. ಪೆಣ್). [Tu. ಪೆರಡೆ].

**ಹೇಡಿ hēḍi.** = ಏಡಿ 2. (Śmd. 109). a timid person, a coward (ದರಿತ, ಕಾತರ, ತ್ರಸ್ತ, ಚಕಿತ Mr. 233; ಹನ್ದೆ, ಶೈತ್ಯಗೊಣ್ಡವ Śm. 96; J. 12, 18; C.; M. ಪೇಡಿಕ್ಕ, to be afraid; see ಅತಿಹೇಡಿ; ಪೋಟ 1); an effeminate man, a hermaphrodite (ಉಭಯವ್ಯಂಜನ, ಪೋಟ Hlā.; ಕ್ಲೀಬ Si. 359). ಹೇಡಿ ಬಲ್ಲನೆ ರಣದ ಸಾಹಸದ ಶೌರ್ಯವನು? (Dp. 76). ಹೇಡಿಯು ಬೆನ್ನು ಕಟ್ಟಲು ಸಲ್ಲ, ಹೇಸಿಯು ನಿಬ್ಬಣಕ್ಕೆ ಹೋಗಲು ಸಲ್ಲ. — ಹೇಡಿ ಯುದ್ಧಕ್ಕೆ ಹೋಗ, ಮೋಡಿ ಕೆಲಸಕ್ಕೆ ಹೋಗ. — ಹಿನ್ದೆ ಹೋದರೆ ಹೇಡಿ, ಮುನ್ದೆ ಬನ್ದರೆ ಗವಿಡ (Prvs.).

**ಹೇಡಿತನ hēḍitana.** cowardice (Rām. 6, 35, 26; My.). ಬೇಡಿ ಕೊಣ್ಡಷ್ಟೂ ಹೇಡಿತನ ಹೋಗಲಿಲ್ಲ (Prv.).

**ಹೇಣ್ಟೆ hēṇṭe.** = ಹೇಟೆ. hen. (My.).

**ಹೇತ್ hēt.** a sound used in fields when scaring away birds (S. Mhr.).

**ಹೇತಿ hēti.** *a weapon.* 2, *light, splendor.* 3, *flame.* 4, *a ray of light.*

**ಹೇತು hētu.** P. p. of ಹೇಲು 1.

**ಹೇತು hētu.** impulse, motive; *cause, ground, reason,* object, purpose; a logical reason, the reason for an inference; any logical deduction or argument, *proof*; reasoning, logic; excuse, sophistry; a particular figure of speech, a brief speech giving a reason; one of the vāstavas [Kr. 3, 4. 164]; (Kāvy. III, 3, B, 21-29). see Śmd. 156. 158. 159. 268. 272. ಹೇತುವಿಲ್ಲದೆ ಮಾತು ಬಾರದು. — ಸರಸವಾದದ್ದೆಲ್ಲಾ ವಿರಸಕ್ಕೆ ಹೇತು (Prvs.).

**ಹೇತುಕ hētuka.** belonging to a motive or cause, causal, instrumental; causing, producing; cause, active cause, instrument. (Kāvy. IV, 2, 30).

**ಹೇತುಕರ್ತೃಕ hētu-kartrika.** the agent indicated by a verb as causing something to happen (Śmd. 325).

**ಹೇತುಕ್ರಿಯೆ hētu-kriye.** causal action (ಕಾರಣಕ್ರಿಯೆ Śmd. 277 Cm.; ನಿಮಿತ್ತಮಪ್ಪ ಕ್ರಿಯೆ vṛitti).

**ಹೇತುಗರ್ಭ hētu-garbha.** that has involved within itself its reason, meaning, etc.; that has some involved sense, as an act, etc. (Mhr.; R.).

**ಹೇತುಪ್ರಯೋಗ hētu-prayōga.** causal form (of verbs, Kāvy. 1, 5, 44-46).

**ಹೇತುಮತ್ hētu-mat.** = ಹೇತುವತ್. having a reason or cause, proceeding from a cause, having a logical reason or the reason for an inference; accompanied by arguments; controverted by arguments.

**ಹೇತುರೂಪಕ hētu-rūpaka.** one of the rūpakas [Kr. 3, 20]; (Kāvy. III, 3, B, 81 seq.).

**ಹೇತುವತ್ hētu-vat.** = ಹೇತುಮತ್.

**ಹೇತುವದಾಖ್ಯಾನ hētuvat-ākhyāna.** a branch of the hētu in poetical composition (Kāvy. III, 3, B, 21).

**ಹೇತುವೆ hētuve.** = ಹೇತು. (G.; R.).

**ಹೇತೂಪನ್ಯಾಸ hētu-upanyāsa.** the assignment of reasons or motives, statement of an argument. (R.).

**ಹೇತೂಪಮೆ hētu-upame.** one of the upames or similes [Kr. 3, 86]; (Kāvy. III, 3, B, 63 seq.).

***ಹೇತ್ವಾಕ್ಷೇಪ hētu-ākṣēpa.** one of the figures of speech. Kr. 3, 106.

**ಹೇದೆ hēde.** a demon (ಭೂತ Śmd. II; see s. ಪೇ 1; *cf.* ಪೇತು).

**ಹೇನ್ hēn. ಹೇನು.** = ಪೇನ್ 2. a louse (ಮಸ್ತಕಮೃಗ, ಷಟ್ಪದ Mr. 166; ಯೂಕ G.; C.; ಲಿಕ್ಷೆ Si. 485). ಹೇನಿನ ತತ್ತಿ (ದಿಂಕ G.). ಹೇನು ಬಲ್ಲುದೆ ಮುಡಿದ ಹೂವಿನಾ ಪರಿಮಳವ? (Dp. 76). ಹೇನು ಕುಕ್ಕುವದಕ್ಕೆ ಅಮ್ಬು ಬೇಕೇ? — ಹೇನು ಬೆಳದರೆ ಆನೆ ಆದೀತೇ? — ಬೇನೆ ನಿತ್ತರೂ ಹೇನಿನ ಕಾಟ ನಿಲ್ಲಲಿಲ್ಲ. — ಹಗಲೆಲ್ಲಾ ಹಾದರವಾಡಿ, ಇರುಳು ಗಣ್ಡನ ತಲೆಯ ಹೇನು ತೆಗದಳನ್ತೆ. — ಸೀನಿದರೆ ಹೇನು ಹೋದೀತೇ? (Prvs.). (ಜೋಗಿ) ಜಡೆಯ ಕಟ್ಟಿದ ಮುನ್ನ ಒಡನೆ ಬನ್ದುದು ಮಾರಿ; (ಆ ಮೇಲೆ) ಗುಡಿಗುಡಿಸಿ ಹೇನು (ಜಡೆಯಲ್ಲಿ) ಹರಿಯಲು, ಬೋಟಿಯ್ಯ ಕಡು ನಗುವನಯ್ಯ (Sp.).

**ಹೇನೆ hēne.** = -ಏನೆ, (ಅಹೆಂ, ಅಹೆನೆ). a common affix for the first person singular of the present. see ಇದ್ದೇನೆ.

**ಹೇಮ hēma.** 1. *gold.* 2, *horse of a dark or brownish colour.* ತುರಗ ವರ್ಣಂ ಕರಿಹಾಗೆ ಹೇಮನಕ್ಕು (Mr. 275). ಹೇಮವಿಲ್ಲದಿದ್ದರೆ ಕಾಮಕ್ಕೆ ಕಡಿಮೆಯೆ? — ಪ್ರೇಮದಿನ್ದ ಹೇಮ ಕೂಡಿಸಿ, ಹೋಮಕ್ಕೆ ತಣ್ಣೆ ತೀರಿಸಿದ. — ಕ್ಷೇಮವಿಲ್ಲದಿದ್ದರೂ ಹೇಮದ ಆಶೆ ಬಿಡ (Prvs.).

**ಹೇಮ hēma.** 2. (fr. ಹಿಮ). winter; cold, the cold season. see ಹೈಮ 2.

**ಹೇಮಕುಕ್ಷಿ hēma-kukṣi.** having a golden belly: Brahmā (Mr. 9).

**ಹೇಮಕೂಟ hēma-kūṭa.** golden-peaked: *a mountain-range to the north of Himālaya.*

**ಹೇಮಗರ್ಭ hēma-garbha.** = ಹಿರಣ್ಯಗರ್ಭ. Brahmā (Bp. 46, 18).

**ಹೇಮದುಗ್ಧ hēma-dugdha.** a kind of sōma or moon-plant with yellow juice (= ಸ್ವರ್ಣಕ್ಷೀರಿ Sk.; ಚುಕುಳ, ಅಕ್ಕಿಹೆಡೆ Mr. 129). 2, the glomerous fig-tree.

**ಹೇಮದುಗ್ಧಕ hēma-dugdhaka.** *the glomerous fig-tree, ficus glomerata* Roxb.

**ಹೇಮನಗ hēma-naga.** = ಹೇಮಾದ್ರಿ.

**ಹೇಮನಗಧಾಮ hēmanaga-dhāma.** Śiva (Śśv. 5, 25).

**ಹೇಮನ್ತ hēmanta.** *winter, the cold season* (comprising the months saha and sahasya Mr. 70, from middle of November to middle of January; ಅಯ್ಬಿಲ್, ಮಂಜುಗಾಲ Ct. II, 85).

**ಹೇಮಪರ್ವತ hēma-parvata.** *the mountain Mēru.*

**ಹೇಮಪುಷ್ಪ hēma-puṟpa.** = ಹೇಮಪುಷ್ಪ. (Hlā. MS.).

**ಹೇಮಪುಷ್ಪ hēma-puṣpa.** *the tree Mesua ferrea* Lin. 2, the tree Michelia champaca Lin.

**ಹೇಮಪುಷ್ಪಕ hēma-puṣpaka.** *the tree Michelia champaca* Lin.

**ಹೇಮಪುಷ್ಪಿಕೆ hēma-puṣpike.** *the golden or yellow jasmine.* see Nr. s. ಹೊಮ್ಬಣ್ಣ.

**ಹೇಮಪ್ರಭ hēma-prabha.** N. (Abh. P. 3, 57. 60).

**ಹೇಮಮೃಗ hēma-mṛiga.** a golden deer (being a transformation of the rākṣasa Mārīca). (My.; *cf.* ಹೊಮ್ಮಿಗ).

**ಹೇಮಲಮ್ಬ hēma-lamba.** = ಹೇವಿಲಮ್ಬಿ. N. of the thirty-first year of the cycle of sixty.

**ಹೇಮಾಂಗ hēma-aṅga.** a golden body. 2, having a golden body: Garuḍa; a lion; the mountain Mēru; Brahmā; Viṣṇu. (R.).

**ಹೇಮಾದ್ರಿ hēma-adri.** *the mountain Mēru.*

**ಹೇಮಾಮ್ಬರ hēma-ambara.** a garment of yellow silk (J. 26, 69).

**ಹೇಮಾಸನ hēma-āsana.** a golden seat (Cpr. 5, 7).

**ಹೇಯ hēya.** to be gone. 2, to be left or abandoned, to be avoided; that is to be left or abandoned (ಸತ್, ಬಿಡುವುದು Nn. 84. o. r. ತೊಱದುದು; ಹೇಹ, ತೊಱವ, o. r. ತೊಱವುದು 95); that is very distant (ಅತಿದೂರ Nn. 137). 3, grief (ದುಃಖ 137). 4, anger (ನಿಷ್ಠುರ, ಕೋಪ 137). 5, option or volition (ಮನೋವಿಕಲ್ಪ, ಮನಸ್ಸಿನ ಸಂಕಲ್ಪ 137). 6, that is perceptible to the eye, etc. (ಪ್ರತ್ಯಕ್ಷ, ದೃಷ್ಟ 137). 7, that is near (ಆಸನ್ನ, ಸಮೀಪ 137). 8, an object of disease (Bp. 40, 78). 9, an object of sorrow (J. 23, 62). 10, dislike, etc. (ಹಾ, ಜುಗುಪ್ಸೆ Nn. 140). — ಹೇಯಪುಳ್ಳವ. -ಉಳ್ಳವ. a disgusting man (ಅರೋಚಿ Śmd. 72 Cm.).

**ಹೇರ್ hēr.** = ಪೇರ್, etc. largeness, etc. — ಹೇರಡವಿ. -ಅಡವಿ. = ಪೇರಡವಿ. a large forest or jungle (ಮಹಾರಣ್ಯ Nr.; Bh. 1, 5, 20; 6, 4, 107; J. 12, 15). — ಹೇರಾನೆ. -ಆನೆ. = ಪೇರಾನೆ. a large elephant (Bp. 26, 15; Bh. 2, 3, 42). — ಹೇರಾಳ್. -ಆಳ್. = ಪೇರಾಳ್. a great soldier (Bh. 3, 18, 33). — ಹೇರಿಟ್ಟಿ. -ಇಟ್ಟಿ. a large lance or spear (C. Bp. 47, 37). — ಹೇರುರ. -ಉರ. = ಪೇರುರ. a large, broad chest (C. Bp. 47, 14). — ಹೇರೊಡಲ್. -ಒಡಲ್. = ಪೇರೊಡಲ್. a large belly (Bp. 51, 54; J. 4, 46).

**ಹೇರಕ hēraka.** = ಹೇರಿಕ. *a spy, a secret emissary or agent* (Hlā. MS. ಹೇರಿಕ).

**ಹೇರಮ್ಬ hēramba.** *Gaṇēśa.* 2, a buffalo.

**ಹೇರಮ್ಬಜನಕ hēramba-janaka.** Śiva (Śśv. 4, 102).

**ಹೇರಳ hēraḷa.** = ಹೇರಾಳ. largeness, greatness, muchness, abundance; much, many (C.; ಬಹಳ G.; B. 4, 147).

**ಹೇರಳೆ hēraḷe.** = (ಪೇರೀಳೆ s. ಪೇರ್), ಹಿರಳೆ, etc. a kind of lime (My.; ಐರಾವತ, ನಾರಂಗ Si. 130; ಕಿತ್ತಳೆ G.). see ಹೇರುಳೆ.

**ಹೇರಾಸಿ hē (*i. e.* hēr)-rāsi.** a large heap: abundance, muchness (Rām. 6, 45, 61; My.). — ಹೇರಾಸಿ ಮಾರಾಸಿ. reit. (My.).

— ದಿನ್ನೇ ಮೇಲೆ ಮಟಿ ಹೊಯ್ದರೆ ಹಳ್ಳಕ್ಕೆ ಬರುವದು. — ಸೋರುವ ಮನೇಲಿ ಉಚ್ಚಿ ಹೊಯ್ದರೆ ಹಳ್ಳದ ಕೂಡೇ ಹಳ್ಳ (Prvs.). — ಹೊಯ್ದಾಡು. -ಆಡು. = ಪೊಯ್ದಾಡು. (Bh. 1, 10, 37; My.). 2, to pour about.

**ಹೊಯ್ hoy. 2.** = ಹೊಯ್ದು. P. p. of ಹೊಯ್1, in ಹೊಯ್ ಕೊಳ್ಳು (My.). see Dp. s. ಬುಗ್ಗಿ.

**ಹೊಯ್ hoy. 3.** = ಪೊಯ್2, etc. a stroke, a blow (Bh. 1, 10, 36); casting, etc. — ಹೊಯ್ಕವ್ವು. a club for beating (Bh. 1, 7, 16). — ಹೊಯ್ಕಯ್. = ಹೊಯಿಕೆಯ್, q. v. (Bh. 2, 13, 27). — ಹೊಯ್ಗಡುಬು. -ಕಡುಬು. = ಹೊಯಿ ಗಡುಬು, q. v. (My.). — ಹೊಯ್ನೀರ್. = ಪೊಯ್ನೀರ್. water that is poured (My.). — ಹೊಯ್ಹಾಲು. milk that is poured or put (into the mouth of children, My.).

**ಹೊಯಿ hoyi. 1.** = ಒಯಿ 2, ಹೊಯ್1, etc, to beat, etc.; to cast (as types, C.; B. 4, 209), to pour. P. p. ಹೊಯಿದು. see Sp. s. ಹರಿ 4; Bp. 21, 10; 37, 42. 44. ಬಯ್ದ ಬಾಯಿಗೆ ಹೊಯಿದ ಪೆಟ್ಟು. — ಮಣ್ಣು ಹೊಯಿದು ಅವ್ವಲಿ ಕಾಸಿದರೆ ಉಪ್ಪೇಕಾದೀತೇ? (Prvs.). — ಹೊಯಿದಾಟ. -ಆಟ. beating, etc. 2, struggling, etc. (ಹೊಡದಾಟ G. 580). — ಹೊಯಿದಾಡು. -ಆಡು. = ಹೊಯ್ದಾಡು. (Bhāgavata 3, 2, 48; G. 219). — ಹೊಯಿ ಹೊಯಿ. rep. (Bp. 37, 42).

**ಹೊಯಿ hoyi. 2.** = ಹೊಯ್ 3, etc. beating; casting; pouring. — ಹೊಯಿಕೆಯ್. = ಹೊಯ್ಕಯ್. casting or moulding-work: a cast (of something else), a counterfeit, a likeness; likeness (ಸರಿ, ದೊರೆ, ಪಡಿ, ಪಾಸಟಿ, ಎಣೆ, ಹೋಟಿ, etc., ಸಮಾನ Ś s.). 2, fight. — ಹೊಯಿಗಡುಬು. -ಕಡುಬು. = ಹೊಯ್ಗಡುಬು. a cake of which the dough is poured into a vessel and boiled in steam (C. Bp. 47, 42). — ಹೊಯಿಗಲವು (-ಕಲವು?). see r. 216 Ms. ಕ್ಷೀರಸ.

**ಹೊಯಿಗೆ hoyige.** sand (My.; *cf.* ಪುಟಿಲ್?). ಹೊಯಿಗೇಲಿ ಬರೆದು, ಉಡೀಲಿ ಹಾಕಿ ಕೊಂಡ ಹಾಗೆ (Prv.). [Tu. ಪೊಯ್ಯೆ].

**ಹೊಯಿತ hoyita.** beating; a stroke, a blow (My.). 2, pouring.

**ಹೊಯಿಲು hoyilu. 1.** = ಹುಯಿಲು, etc. calling out, vociferation; noise (My.). [Tu. ಪುಯಲ್].

**ಹೊಯಿಲು hoyilu. 2.** beating, etc.; a stroke, a blow (Bp. 52, 9. 20; My.; see ಬಿಱು-); the beating, *i. e.* the current or flow of a river or stream (My.).

**ಹೊಯಿಸಣ hoyisaṇa.** N. of a country. (ಕುದುರೆ) ಹೊಯಿಸಣದೊಳ್ ಉದಿಸಿರಲ್ (ಭೂಮಿಜ Mr. 282). *cf.* ಹೊಯಿಸಳ.

*ಹೊಯಿಸಳ **hoyisaḷa.** N. of a royal dynasty.

**ಹೊಯಿಸು hoyisu.** = ಪೊಯಿಸು, etc. to cause to beat (as a drum, etc., My.); to cause to cut off (as a head, C.; B. 4, 80); to cause to beat, *i. e.* to cause to create (as a sound, Bp. 26, 22); to cause to cast or pour (My.).

**ಹೊಯ್ಯು hoyyu.** = ಹೊಯ್ 1, etc. to beat, to pour, etc. ಹೊಯ್ಯುವದು (C.). ಸೆಟ್ಟಿ ಏನು ಮಾಡುತ್ತಾನೆ? ಅಳೆಯುತ್ತಾನೆ, ಹೊಯ್ಯುತ್ತಾನೆ (Prv.).

**ಹೊಯ್ಲು hoylu.** = ಪೊಯಿಲ್, etc., ಹೊಯಿಲು 2. beating (as of a drum, Rām. 3, 68); a stroke, a blow (Bp. 50, 6. 7; 52, 10. 13. 16. 18; Bh. 1, 19, 19; 3, 19, 50; 5, 3, 99). ಹಾದರಕ್ಕೆ ಹುಟ್ಟಿದ ಮಗ ಹೊಯ್ಲಿಗೆ ಬಿದ್ದು ಸತ್ತ (Prv.).

**ಹೊಯ್ಸು hoysu.** = ಹೊಯಿಸು, etc. to cause to beat (as a drum, Rām. 1, 13, 12; 5, 1, 5); to cause to beat or cut in, to cause to engrave (Bp. 59, 56); to cause to cast or pour (55, 14).

**ಹೊರ hora. 1.** P. p. of ಹೊರೆ 1, in ಹೊರ ಕೊಳ್ಳು. (C.; B. 4, 199).

**ಹೊರ hora. 2.** = ಪೊರೆ 4, etc. joining, etc. see ಹೊರಕುಳಿ.

**ಹೊರಕ horaka.** one who nourishes. see ಹೊಟ್ಟೆ-.

**ಹೊರಕುಳಿ hora-kuḷi.** a person who joins others, *i. e.* depends on others (for his sustenance, ಪರಜಾತ, ಪರೈಧಿತ Hlā.); [Tu. ಪೊರುಕ್ಕಿ].

**ಹೊರಜಿ horaji.** = ಹೊರಜೆ, ಹೋರ್ಜಿ. a stout and long rope used in drawing an idol-car on festive occasions (My.).

**ಹೊರಜೆ horaje.** a cord put round the neck of an elephant, etc. (C. Bp. 47, 44; T. ಪುರಜ್ಜೈ, ಪುರೋಜ್ಜೈ).

**ಹೊರಟು horaṭu.** = ಹೊರಡು 2. a hump (Bp. 50, 31; *cf.* the terms s. ಪೊವರ್ 2; T. ಪೊಟಿಲ್, greatness = ಪೆರುಮೈ). — ಹೊರಟ. -ಅ 3. a hump-backed man. — ಹೊರಟಪಾಣ್ಡ್ಯ. N. (Bp. 50, 31). — ಹೊರಟ ಬೆನ್ನು. a back with a hump (Bp. 20, 11; 50, 31).

**ಹೊರಡು horaḍu. 1.** = ಪೊರಳ್, etc. to roll; to welter; to cause to roll, etc. (ಪರಿಲುಠನ, ಪರಿಲುಠನಮೆನ್ದು, ಪೊರಳ್ಚುವುದು Śmd. Dh.). [Tu. ಪುರೆಳ್, ಪುಡೆರ್].

**ಹೊರಡು horaḍu. 2.** = ಹೊರಟು. a hump. (ಗಡು ಎನ್ದೊಡೆ ಕುಬ್ಜ, ಬೆನ್ನ ಹೊರಡುಂ (Nr.).

**ಹೊರದು horadu.** = ಹೊರೆದು. P. p. of ಹೊರೆ 1. (My.).

**ಹೊರವು horavu.** a joining luxuriance. ಬೆಳೆ ಹಣ್ಣುಕಾಯಿ ಮರ, etc. ಹೊರವಾಗಿದೆ or ಹೊರವಾಗಿ ಬೆಳೆದದೆ (My.).

**ಹೊರಸು horasu.** a cot, a couch (ಖಟ್ವ Mr. 202; B. 2, 30; 4, 75). ಎಚ್ಚತ್ತೆನ್ದು, ಹೊರಸಿನ ನೆಯ್ಗೆಯ ಊಕೆಯ ನುಲಿಯುವ್ ಅಕ್ಕುಂ (Śmd. I).

**ಹೊರಳಿ horaḷi.** = ಪೊರಳಿ. a heap, a mass, an assemblage (ಸಮೂಹ Śs.; ಮೊಕ್ಕಳ, ಒಬ್ಬುಳಿ, ಒಟ್ಟೈಲ್, ಒಗ್ಗು, etc. Kk. 17; ಗೊನ್ದಣಿ, ತೆರಳ್ಕೆ, ಸಾಲ್, ಒಬ್ಬುಳಿ, ಬಳಗ, ಮೊತ್ತ, etc., ಶ್ರೇಣಿಕೆ Śm. 54; Bp. 58, 50; Bh. 1, 20, 55. 60; J. 13, 12). — ಹೊರಳಿಗಟ್ಟು. -ಕಟ್ಟು. a mass to be formed: to assemble (Bh. 6, 7, 19). — ಹೊರಳಿಗಿಡಿ. -ಕಿಡಿ. massed sparks (Bh. 8, 25, 12). — ಹೊರಳಿಗೆಡು. -ಕೆಡು. to disperse (v. i., Bh. 3, 18, 42). — ಹೊರಳಿವೆಣ. -ಹೆಣ. massed corpses (Rām. 6, 30, 8).

**ಹೊರಳಿಸು horaḷisu.** = ಪೊರಳ್ಚು, ಹೊಳ್ಳಿಸು. to cause to roll, etc., to roll about (C.); to have rolled (My.). ತುಪ್ಪದಲ್ಲಿ ಕರದು ಸಕ್ಕರೆಯಲ್ಲಿ ಹೊರಳಿಸಿದ ಗೋದಿಯ ತುಕಡಿಗಳ ಚೂರು (Cb. 136).

**ಹೊರಳು horaḷu.** = ಪೊರಳು, etc., ಹೊಳ್ಳು2. to roll; to welter, to wallow (Bp. 45, 27; 49, 26; 52, 15; Bh. 4, 4, 15; 6, 8, 12; Rām. 6, 30, 14; J. 8, 40; C.; B. 4, 82). ಉಪ್ಪಿನವ ಕೆಟ್ಟೆನೆನ್ದರೆ ತೆಂಗಿನ ಕಾಯಿಯವ ಹೊರಳಿ ಹೊರಳಿ ಅತ್ತ. — ಕತ್ತೆ ತಿನ್ದೂ ಹಾಟು, ಹೊರಳಿಯೂ ಹಾಟು (Prvs.). ನೆಲದಲ್ಲಿ ಅಡಿಗಡಿಗೆ ವೆಲ್ಲಹಿಸುವಲ್ಲಿ ಉಪಾವೃತ್ತ ಉಚಿತ ಎನಿಸುಗು, ಇದು ಹೊರಳುವುದು (Nr.). — ಹೊರಳಾಡು. -ಆಡು. to roll about; to welter, to tumble about (as a horse, a donkey, etc., C.; Si. 274; B. 3, 24; 4, 47). — ಹೊರಳ್ಯಾಡಿಸು.

-ಅಡಿಸು. to cause to roll about, etc. (G. 98.).— ಹೊರಳ್ಯಾಡು. -ಆಡು. = ಹೊರಳಾಡು. (G. 78; Cb. 89; B. 5, 21. 250).

**ಹೊರಳುವಿಕೆ horaḷuvike.** rolling, etc. (G. 580).

**ಹೊರಳೆ horaḷe. 1.** = ಹೊಳ್ಳೆ 1. a nostril (B. 3, 65; 4, 22; see ಪುರೆ).

**ಹೊರಳೆ horaḷe. 2.** money of one head of accounts transferred to another in order to be returned (My.).

**ಹೊರಿಕೆ horike.** = ಪೊರೆ 5, etc., ಹೊರಿಗೆ. the scale or coat of an onion; a thin layer or scale of a stone, a lamina, a stratum, a layer (My.).

**ಹೊರಿಗೆ horige.** = ಹೊರಿಕೆ, etc. (My.; Rām. 3, 6, 8).

**ಹೊರಿಸು horisu.** = ಪೊರೆಯಿಸು. to have oneself nourished, to depend on somebody for one's sustenance. ದೈವವ್ಪೊರಿಸಿ *i. e.* ದೈವಂ ಪೊರಿಸಿ ಇರ್ಪವನು ಯದೃಚ್ಛಾವಿಷ್ಟ, ದೈವಪರ Hlā.). 2, to cause to nourish.

**ಹೊರುಕುಳಿ horukuḷi.** = ಪೊರ್ಕುಳಿ, q. v. a wave.

**ಹೊರುವಂಜ horumañja.** = ಹುರುಮಂಜಿ, etc. a wave. a particular red ochre. (S. Mhr.).

**ಹೊರೆ hore. 1.** = ಪೊರೆ 1, q. v. to nourish, etc. (ಪೋಷಣ Śm. 103; Bh. 1, 10, 5. 15; C.); to invigorate, to refresh (Bh. 1, 5, 10). [ಮರ ಗಿಡು ಬಳ್ಳಿಗಳ ಬೆಳಸೆಲ್ಲ ತಱಿತಱಿದು, ಪ್ರಾಣವ ಕೊಂದು ಶರೀರವ ಹೊರೆವ ದೋಷಕ್ಕೆ ಇನ್ನಾವುದು ವಿಧಿಯಯ್ಯಾ Cv. 603]. ತನ್ನ ಒಡಲ ಹೊರೆವಾತನು (ಆತ್ಮಂಭರಿ, ಕುಕ್ಷಿಂಭರಿ); ಹೊರೆವಾತನು (ಪೋಷ್ಟೃ; ಭರ್ತೃ); ಹೊರೆಯಲ್ ಪಟ್ಟುದು (ಪುಷ್ಟ, ಪುಷಿತ Nr.). ತನ್ನ ಬಸಿಱ ಹೊರೆವವ (ಅದ್ಮೂನ, ಔದರಿಕ Hlā.). ತನ್ನ ಹೊಟ್ಟೆ ಹೊರ ಕೊಮ್ಬುವವನು (ಆತ್ಮಂಭರಿ, etc. Si. 358; see ಹೊರ ಕೊಳ್ಳು s. ಹೊರ 1). ತನ್ನ ಹೊಟ್ಟೇ ತಾನು ಹೊರೆಯದವ ಮುನ್ನಾರ ಸಲಹುವನು? (Prv.).

**ಹೊರೆ hore. 2.** = ಪೊರೆ 3, q. v. to join (v. i.); to come near; to come upon (Bh. 1, 8, 73; Rām 6, 50, 10); — to join (v. t.), to apply to, to put to (Rām. 1, 13, 5). ಸೀರೆಯ ಹೊರೆವ ಚೂರ್ಣ (ಪಿಷ್ಟಾತ, ಪಟವಾಸಕ Nr.). see ಹೊಲೆ-.

**ಹೊರೆ hore. 3.** = ಪೊರೆ 4, etc. joining; a joining, a web or piece of cloth (B. 3, 103); nearness, neighbourhood, vicinity (ಸನಿಹ Śm. 103; Bp. 28, 18; 50, 20: Bh. 10, 8, 7; J. 7, 62); side (ಪಕ್ಕ Śm. 103). ಊರ ಹೊರೆ (ಗ್ರಾಮಾನ್ತಿಕ, ಉಪಶಲ್ಯ, ಪರ್ಯನ್ತ, ಪರಿಸರ, ಕಟ Hlā.). [ಹೊಲೆಯ ಹೊಲಬಿಗನಾದೊಡೆ ಅವನ ಹೊರೆಯಲಿಪ್ಪುದು ಲೇಸು ಕಣ್ಡಯ್ಯಾ Bv. 135].

**ಹೊರೆ hore. 4.** = ಪೊರೆ 5, etc. the skin or slough of a serpent (My.; Si. 77. 78); a layer or coat of a plantain tree [ಮಾಡುವ ಭಕ್ತನ ಕಾಯ, ಬಾಳೆಯ ಕಮ್ಬದನ್ತಿರಬೇಕು. ಮೆಲ್ಲಮೆಲ್ಲನೆ ಹೊರೆಯುತ್ತಿ ನೋಡಿದರೆ ಒಳಗೆ ಕೆಚ್ಚಿಲ್ಲದಿರಬೇಕು Bv. 521]; (Bp. 35, 38; My.); a fold (ಪದರ Śm. 103).

**ಹೊರೆ hore. 5.** = ಪೊರೆ 7. wrongness, fault, deceit (Bp. 40, 60; Bh. 1, 8, 76). [— ಹೊರೆಹುಟ್ಟು. fault to arise. ಲಿಂಗವೆ ಜಂಗಮ, ಜಂಗಮವೆ ಲಿಂಗವೆನ್ದು ನಮ್ಬಿದಲ್ಲಿ ಹೊರೆಹುಟ್ಟಿದ ಬಳಿಕ, ಹಾಲ ಹರವಿಯೊಳಗೆ ಹುಳಿಹೊಕ್ಕನ್ತೆ ನೋಡಯ್ಯಾ Cv. 303]. — ಹೊರೆ ಹೊಗು. to feel a choking sensation (Bh. 7, 1, 39).

**ಹೊರೆ hore. 6.** = ಪುರಿ, etc. invigoration, spirit, courage, etc. (Bp. 8, 5, 10; 8, 21, 3. 5; 8, 23, 4). — ಹೊರೆಗುನ್ದು. -ಕುನ್ದು. to become spiritless or discouraged (Bp. 1, 14, 25). — ಹೊರೆಯೇಱು. -ಏಱು. to grow full of spirit, etc. (Bh. 6, 6, 34; 8, 21, 4).

**ಹೊರೆಹ horeha.** nourishing: invigorating, reviving. ಕೆಟ್ಟ ಗನ್ಧವ ಹೊರೆಹ (ಪ್ರಬೋಧನ, ಅನುಬೋಧ Nr.).

**ಹೊಱ hoṟa.** = ಪೊಱ 2. the outside; outside; to the outside; forth. datives ಹೊಱಕ್ಕೆ (My.; Si. 85. 393), ಹೊಱಯಿಕೆ (Bp. 33, 18). — ಹೊಱ ಉಸುಱು. breath exhaled (S. Mhr.). — ಹೊಱಕಡೆ. the outside. ಪುಷ್ಪಮಾಲಿಕೆ ತಳಿರುದೋರಣ ಮಾವಿನ ಸೊಪ್ಪು ಮುನ್ತಾದವುಗಳನ್ನು ಕಟ್ಟುವದಕ್ಕೋಸ್ಕರ ಬಾಗಿಲ ಹೊಱಕಡೆಗೆ ಕಾಣುವನ್ತೆ ಎರಡು ಕಮ್ಬಗಳಿನ್ದ ಕಟ್ಟಲ್ ಪಟ್ಟ ದ್ವಾರಬನ್ಧನದ ಚೌಕಟ್ಟು (ತೋರಣ, ಬಹಿರ್ದ್ವಾರ Si. 112). 2, a public privy (My.). 3, evacuation of the bowels (My., in ಹೊಱಕಡೆಯಾಗು).— ಹೊಱಕೂಟ. an outer or other connection, etc. (ಅನ್ತರ Mr. 531; Nn. 77). — ಹೊಱಕೆಯ್. the outside (Bh. 8, 25, 4; My.). 2, another hand (Bp. 15, 10). 3, the upper part of the hand (Bp. 21, 48). — ಹೊಱಗಡೆ. -ಕಡೆ. the outside (C.; B. 5, 261). — ಹೊಱಗರಿ. -ಕರಿ 4. to go far outside: to just, to project (Bp. 20, 12). — ಹೊಱಗುಡಿ. a tent that is outside (a wood, Bh. 3, 18, 34). — ಹೊಱಗೆಡವು. -ಕೆಡವು. to throw to the outside: to allow to burst forth or come out (as a laugh or fear; B. 5, 143. 164). — ಹೊಱ ಚೆಲ್ಲು. to pour out (My.). 2, to flow over, to be spilt (C.; G. 67). — ಹೊಱತನಕ. so far as the outside (B. 3, 34). — ಹೊಱದವಡೆ. the outer side of the lower cheek (My.), or of the jaws (Si. 214). — ಹೊಱ ನೂಂಕು. to push outside, to remove (Bp. 21, 30). — ಹೊಱ ಪಡಿಸು. to make public, to drive out (My.). — ಹೊಱ ಪಡು. to become public (My.). — ಹೊಱಪಾಳೆಯ. a camp that is outside (C. Bp. 42, 13; Bh. 3, 18, 34). — ಹೊಱಬಾಗಿಲು. the outer door or gate (My.; Si. 112; ಅಲಿನ್ದ, ತೋರಣ G.). — ಹೊಱಬಾಹೆ. the outside (Bh. 3, 17, 42).— ಹೊಱ ಬೀೞು. to come forth (B. 3, 31. 36. 68. 75; 4, 22. 40. 49. 113. 119); to sally; to escape (Bh. 1, 8, 21). 2, to come out, to become public (My.), to be detected (My.; G. 226).— ಹೊಱಮುಗ್ಗಿಲು. the outside (C.; B. 4, 70). — ಹೊಱಮುಟ್ಟು. the outer space about (a house, etc., My.). — ಹೊಱಮಡಿಸು. -ಪಡಿಸು = ಪೊಱಮಡಿಸು, q. v. (Bp. 50, 21. 22). — ಹೊಱಮರಿ. -ಪರಿ. to flow forth (Bh. 3, 19, 12). — ಹೊಱಮಿಂಚು. = ಪೊಱಮಿಂಚು, q. v. (My.). — ಹೊಱಮುಚ್ಚಕ. a small annual plant, biophytum sensitivum D. C. (Z.). — ಹೊಱಮೆಯ್. = ಪೊಱಮೆಯ್. the outside (C.; B. 4, 140). — ಹೊಱವಡಿಸು. -ಪಡಿಸು. = ಹೊಱಮಡಿಸು, etc. (Bp. 42, 19; 43, 52). ಹೊಱವಡಿಸಲು ಪಟ್ಟವನು (ನಿಃಕಾಸಿತ, ಅವಕೃಷ್ಟ Nr.). — ಹೊಱವಡು. -ಪಡು. = ಪೊಱಮಡು, q. v. (Bp. 18, 53). P. ps. ಹೊಱವಟ್ಟು, ಹೊಱವಣ್ಟು (Bp. 12, 48; Rām. 4, 3, 4. 5). ಕೂಪಾದಿಗಳಿನ್ದ ಉದಕ ಹೊಱವಟ್ಟು ಚಕ್ರಾಕಾರದಿನ್ದ ಎಲ್ಲಾ ದೆಸೆಯಲ್ಲಿ ಪಸರಿಸುತ್ತಿದ್ದದು (ಚಕ್ರ, ಪುಟಭೇದ, ಮೊರಹು Nr.). [ಹೊಸತಿಲ ಪೂಜಿಸಿ ಹೊಱವಟ್ಟು ಹೋದ ಒಕ್ಕಲಿತಿಯನ್ತಾಯಿತ್ತೆನ್ನ ಭಕ್ತಿ Bv. 422; Cv. 531]. — ಹೊಱವಣ್ಡಿಸು. = ಹೊಱವಡಿಸು, etc. ಬಣ್ಡಯನ್ ಊರ ಹೊಱವಣ್ಡಿಸಿದಂ (Bh. 1, 10, 29). — ಹೊಱ ವಳಯ. = ಹೊಱ ವಳೆಯ, etc. (Rām. 6, 13, 3; Bh. 1, 6, 1). — ಹೊಱ ವಳೆಯ. = ಪೊಱ ವಳೆಯ. environs, surroundings; the state of being about in a circle. ಹೊಱ ವಳೆಯದ ಕಾವಲವನು (ಪರಿಧಿಸ್ಥ, ಪರಿಚರ Nr.). — ಹೊಱವಾಱ್. = ಪೊಱವಾಱ್, etc. a buttock; the posteriors, the buttocks (ನಿತಮ್ಬ Nr.). ಹೊಱವಾಱಲಿ ಇದ್ದ ಕುಣಿಕೆ

ಗಳೆರಡು (ಕುಕುನ್ದರ Nr.). — ಹೊಱವುಕ್ಕಡ. -ಉಕ್ಕಡ. a guard-house outside a town or near the borders of a country (My.). — ಹೊಱಶೂಲ. a stake outside (the town, Bh. 6, 1, 7). — ಹೊಱ ಸುತ್ತು. = ಹೊಱ ವಳೆಯ. (My.; G.). — ಹೊಱ ಸೂಸು. = ಪೊಱ ಸೂಸು, q. v. (Bh. 1, 20, 60). — ಹೊಱಸೊಪ್ಪು. the outer foliage; the rind. ಮರದ ಹೊಱಸೊಪ್ಪು (ತ್ವಚ್, ವಲ್ಕ, ವಲ್ಕಲ Hlā.). [— ಹೊಱಹಂಚಿಕೆ. an outward show. ಎನ್ನ ಭಕ್ತನೆನ್ದೆಮ್ಬರು: ಎನ್ನ ಹೊಱಹಂಚಿಕೆ ಒಳಬೊಳ್ಳೆತನವನಱಿಯರಾಗಿ Bv. 305]. — ಹೊಱ ಹೊಮ್ಮಿಸು. to cause to arise, come forth or spring up; to produce or create. (ಬಾಲೆ) ತನ್ನುವನ್ ಅಡಿಸುವ ಕೆಳದಿಯರ ತಣ್ಣ ವನು ಹೆಮ್ಮೆಗೊಳಿಸುತ, ಸುಖಮುಖವ ಹೊಱ ಹೊಮ್ಮಿಸುತ (Prll. 3, 30). — ಹೊಱ ಹೊಮ್ಮು. to rise; to come forth, to break out (as chicken-pox, etc., My. = ಹೊಮ್ಮು); to sprout, to shoot. ಹೊಸ ತಾಗಿ ಹೊಱ ಹೊಮ್ಮಿದ ಪತ್ರಪುಷ್ಪ ಫಲಾದಿಗಳ ಗೊಂಚಲು (ವಲ್ಲರಿ, ಮಂಜರಿ Nr.). — ಹೊಱ ಹೋಱಗೆ. rep. (Bp. 25, 27. 31, 26, 22; 28, 26). — ಹೊಱ ಹೊಱಡು. to go forth, to egress (C.; Bp. 26, 31; B. 5, 59. 144. 262). — ಹೊಱಾಯ. -ಆಯ. = ಹೊಱಮುಟ್ಟು. (My.).

**ಹೊಱಗು hoṟagu.** = ಪೊಱಗು, etc., ಹೆಱಗು, ಹೊಱಗೆ, ಹೊಱಚ್ಚು. the outside (Bp. 37, 46; 60, 6). declension: ಹೊಱಗಣ, ಹೊಱಗಿನ, ಹೊಱಗಿನ್ದ (C.; B. 2, 6), ಹೊಱಗಿನಿನ್ದ (C.; B. 4, 83). ಬಾಗಿಲ ಹೊಱಗಣ ತೋರಣ (ತೋರಣ, ಬಹಿರ್ದ್ವಾರ); ಹೊಱಗಣ ಬಾಗಿಲೆನ್ದೂ, ಎಮ್ಬರು (Nr.). ಮಣಿಕಟ್ಟು ತೊಡಗಿ ಕಿಱು ಕುಣಿಕೆಪರ್ಯನ್ತಮಾಗಿ ಉಳ್ಳ ಕೆಯ್ಯ ಹೊಱಗು (ಕರಭ, ಮೇಗೆಯ್ Nr.). ಕುಱುಕಟ್ಟಿನೊಳು ಹೊಕ್ಕು ಅಱುವದೇ ತನಿರಸವ, ಹೊಱಗಣ ಸೋಗೆ ಅಗಿ ವನ್ತೆ? (Sp.). ಹೊಱಗಿನ ಕಳ್ಳನನ್ನು ಹಿಡಿಯ ಬಹುದು, ಒಳಗಿನ ಕಳ್ಳ ನನ್ನು ಹಿಡಿಯಲಾಗದು (Prv.). — ಹೊಱಗತ್ತ ನೂಂಕು. -ಅತ್ತ-. to push far away (Bp. 18, 34). — ಹೊಱಗಿನ ಆಚರಣೆ. external practice or observance of established rules (B. 5, 279). — ಹೊಱ ಗಿನ ಸಾಲ. a loan taken from strangers (My.); a loan taken by strangers (My.).

**ಹೊಱಗೆ horage.** = ಪೊಱಗೆ, etc. the outside (Bp. 57, 32); outside, without (Bh. 1, 8, 70; 2, 13, 32; ಬಹಿಸ್, ಬಾಹ್ಯ Si. 475; C.). ಚನ್ನಿಗನ್ ಅಸುವೞಿಯೆ ಹೊಱಗೆ ಹಾಕುವರು (Dp. 1). ಬೆಕ್ಕು ಪಂಜರವನ್ನು ಬೇಕಾದಾಗ ಹೊಱಗೆ ತೆಱೆಯುವವು (B. 3, 30). ಒಳಗಿನ ಹತ್ತಿ ಹೊಱಗೆ ಬರುತ್ತದೆ (4, 27). ಹೊಱಗೆ ಹೋಗುವ ಮಾರಿ ನನ್ನ ಮನೇ ಹೊಕ್ಕು ಹೋಗು! ಅನ್ದ ಹಾಗೆ. — ಹೊಱಗೆ ಭಕ್ತಿ, ಒಳಗೆ ಕತ್ತಿ. — ಹೊಱಗೆ ನೋಡಿದರೆ ಕೋಟೆ, ಒಳಗೆ ನೋಡಿದರೆ ಹೋಟೆ (Prvs.). ಊರ ಹೊಱಗೆ, ಮನೆಯ ಹೊಱಗೆ, etc. (C.). — ಹೊಱಗಾಗು. -ಆಗು. = ಪೊಱಗಾಗು. to become or be outside; to be excluded. ಆಕಾಶ ಹೊಱಗಾದ ಪಂಚಭೂತ (ಅಮ್ಬರವರ್ಜಿತಪಂಚಭೂತ Nn. 82). 2, to become free or exempt from, to be liberated from (as from trouble, offence, etc. My.). 3, to be absent or fail. ಶ್ರೀಗುರು ಸ್ಥಿರಭಕ್ತಿಯಿದು ಹೊಱಗಾಗಿ ಕೋಟಿವಿಧಂಗಳಿಂ ಶ್ರುತಿಯೋಗದಲಿ ಹರ ಭಕ್ತಿಯಂ ಮಾಡಿದೊಡೆ ನಿಷ್ಫಲವು (Bp. 39, 24). 4, to have to go to some outer part of the house: (a woman) to get her courses (My.). — ಹೊಱಗಿಕ್ಕು. -ಇಕ್ಕು. to put out of anything; to put outside, to put out of caste (Bp. 18, 10; My.); to treat contemptuously. ಹೊಱಗಿಕ್ಕಲು ಪಟ್ಟವನು (ಅಪಧ್ವಸ್ತ, ಧಿಕ್ಕೃತ, etc. Nr.). — ಹೊಱಗೆಟಿ³. -ಎಟಿ³. to drag outside (Bp. 28, 27).

**ಹೊಱಚ್ಚು horaccu.** = ಹೊಱಗು, etc. the outside. — ಹೊಱ ಚ್ಚಾಗಿ ಬರು. to come outside or round (a village, etc.; without touching it, My.).

**ಹೊಱಟು horaṭu.** = ಹೊಱ್ಟು. P. p. of ಹೊಱಡು. (C.).

**ಹೊಱಡಿಸು horaḍisu.** to cause to go outside or out of; to turn out; to cause to start (My.). ಹಡಗಿನೊಳ ಹೊಕ್ಕು ಬರುವ ನೀರನ್ನು ಹೊಱಕ್ಕೆ ಹೊಱಡಿಸುವ ಪಾತ್ರ (ಸೇಕಪಾತ್ರ, etc. Si. 85).

**ಹೊಱಡು horaḍu.** to go outside or out of; to come forth; to egress; to set out; to start; to come forth or appear, as a boil (My.). P. ps. ಹೊಱಟು, ಹೊಱ್ಟು. ವೇದ ಪಾಠಸಮಯದಲ್ಲಿ ಬಾಯಿನ್ದ ಹೊಱಡುವ ತುನ್ತುಱುಗಳು (ಬ್ರಹ್ಮಬಿನ್ದು Si. 248); ಯಾವವನು ಹಗೆಯವರನ್ನು ಗೆಲ್ಲುವದಕ್ಕಾಗಿಯೇ ಬಹಳವಾಗಿ ಹೊಱಡುತ್ತಾನೋ, ಅನ್ತಾವನು (ಅಭ್ಯಮಿತ್ರ, etc. 282); ಜಯಾರ್ಥವಾಗಿ ಹೊಱಟ ಅರಸಿನ ಪ್ರಯಾಣ (ಯಾತ್ರೆ, etc. 291); ದಣ್ಡು ಠಾಣ್ಯದ ಸ್ಥಲ ಬಿಟ್ಟು ಹೊಱಟದು (ಪ್ರಚಕ್ರ 291); ಹೊಱಡ ಹಾಕಲ್ ಪಟ್ಟವನು (ನಿಷ್ಕಾಸಿತ, ಅವಕೃಷ್ಟ 364); ಒನ್ದಱಿನ್ದ ಈಚೆಗೆ ಹೊಱಟದು (ಉದ್ವಾನ್ತ, ಉದ್ಗತ 380); ಬಿಸಿಲು ಸಕೆ ಮುನ್ತಾದವುಗಳಲ್ಲಿ ಹೊಗೆ ಹೊಱಡುವನ್ತೆ ಒಣಗಿಸಿ ಕಾಯಿಸಲ್ ಪಟ್ಟನ್ತಾದು (ಸನ್ತಾಪಿತ, ಸನ್ತಪ್ತ, etc. 382); ರಾಯನು ತನ್ನ ಓಲಗದಲ್ಲಿ ಕುಳಿತಾಗ ಮಾತಿಗೆ ಮಾತು ಹೊಱಟು (B. 3, 49). ಊರು ನೂಱು ಸುತ್ತು ಸುತ್ತಿದರೂ ಊರ ಬಾಗಲಲ್ಲಿಯೇ ಹೊಱಡ ಬೇಕು (Prv.).

**ಹೊಱಡುವಿಕೆ horaḍuvike.** going outside, etc. ದಣ್ಡೆತ್ತಿ ಯುದ್ಧಕ್ಕೆ ಹೊಱಡುವಿಕೆ (ಯಾನ Si. 262); ಶತ್ರುಗಳೆದುರಾಗಿ ದಣ್ಡೆತ್ತಿ ಕಾಳಗಕ್ಕೆ ಹೊಱಡುವಿಕೆ (ಅಭಿಷೇಣನ 391); ಹೊಱಕ್ಕೆ ಹೊಱಡುವಿಕೆ (ಪ್ರವಹ, ಬಹಿರ್ಗಮನ 393).

**ಹೊಱತು horatu.** = ಹೊತ್ರ್. that is outside, that is excepted: being left alone; being not that; being not present; except; without. ಈ ಮಾತು ಹೊಱತು ಬೇಱೆ³ ಯಾವಾದರೂ ಹೇೞು! (My.). ಚವರ್ಗ ಟವರ್ಗಂಗಳ್ ಹೊಱತಾಗೆ (ಚಟವರ್ಗವನ್ ಉೞಿಯೆ Śmd. 78 Cm.). ಕಡೆಗೋಲು ಹೊಱತಾಗಿ ಬೆಣ್ಣೆ ತೋಱುವದೇನೊ? (Dp. 148). ಅವನ ಬಾಯ್ಯಲ್ಲಿ ಕೆಟ್ಟ ಮಾತೇ ಹೊಱತು ಒಳ್ಳೇ ಮಾತು ಬರುವದಿಲ್ಲ (My.); (Dp. 52, 2; 145, 8).

**ಹೊಱಬಿಗ horabiga.** = ಪೊಱಬಿಗ. an outsider. (Bh. 10, 6. 9; J. 23, 10).

**ಹೊಱಮೆ horame.** that is outside or in the rear. ಸೇನೆಯ ಹೊಱಮೆ (ಪ್ರತಿಸರ Nr.).

**ಹೊಱಸು horasu.** a kind of pigeon (ಜೀವಂಜೀವ, ಕಪಿಂಜಲ, ಚಕೋರ, ಹಾರೀತ, ವಂಜುಲ, ಕಪೋತ Hlā.; ಕಪೋತ, ಚಕೋರ, ಜೀವಿ, ಹಾರೀತ, ಕಪಿಂಜಲ Mr. 172). [ಕೊಳನ ತಡಿಯಲ್ಲೊನ್ದು ಹೊಱಸು ಕುಳ್ಳಿರ್ದರೇನು ಗಳಹಂಸಿಯಾಗಬಲ್ಲುದೆ? Bv. 98]. *cf.* T. ಪುಱವ, ಪುಱವು, ಪುಱಾ, a dove. Tu. ಪುದೊ.

**ಹೊಱಿಗೆ horige.** = ಪೊಱಿಗೆ, (ಹೋೞಿ³). business, work (Bh. 5, 4, 118; 6, 6, 19; 7, 1, 5; 8, 26, 3; C.).

**ಹೊಱಿಗೆವಾಳ horige-vāḷa.** a servant (Rām. 5, 1, 34; 6, 50, 31).

**ಹೊಱಿಸು horisu.** = ಒಱಿಸು, ಪೊಱಿಸು. to put on the head (of another, My.), to put on (another, Rām. 5, 8, 53); to cause to carry, to have carried (C.); to lay on, to impose (as a business, My.); to impute (as blame, crime, etc., My.). ಒಬ್ಬ ಸೇವಕನ ತಲೆಯ ಮೇಲೆ ಪರಿ ಪರಿಯ ಅನ್ನ ವನ್ನು ಹೊಱಿಸಿ ಕೊಣ್ಡು ಸಂಗಡಲೇ ಬನ್ದು (B. 4, 77). ಇಲ್ಲದ ತಪ್ಪು ಗಳನ್ನು ಮೇಲೆ ಹೊಱಿಸಿ ಹೇೞುವದು (ಮಿಥ್ಯಾಭಿಶಂಸನ, ಅಭಿಶಾಪ Si. 50); ಅಪನಿನ್ದೆಯನ್ನು ಹೊಱಿಸಿ ಅಪಕಾರ ಮಾಡುವಿಕೆ (ನಿಕಾರ, ವಿಪ್ರ ಕಾರ 392). ತಪ್ಪು ಹೊಱಿಸೋಣ (ಆರೋಪಣ G.). ಅವನ ಮೇಲೆ ತಪ್ಪು ಹೊಱಿಸಿದನು (My.). ಅವಳಿಗೆ ಮಾತು ಹೊಱಿಸುತ್ತಾರೆ (B. 2, 292).

**ಹೊಱು hoṟu. ಹೊಱ್.** = ಪೊಱ್, ಪೊಱು. to take upon or bear on the head, to carry on the head, etc.; to carry about (in the heart, as another's dear feet, Bp. 36, 31); to take upon oneself (as a vow, 27, 62), to impute or attribute to oneself (as a fault, 39, 32); to assume or adopt (as a name, 54, 45); to obtain or fetch (as price, see Mr. below); to come upon (somebody, as a fault. *e. g.* ಅವನ ಮೇಲೆ ತಪ್ಪು ಹೊತ್ತಿತು, My.); to impute (to another, see ಅಪರಾಧ-). P. p. ಹೊತ್ತು (q. v.; C.). ಹೊತ್ತ ಬೆಲೆ (ವೇತನ, ಮೌಲ್ಯ, ಕ್ಲಪ್ತ Mr. 346). ಮನುಷ್ಯರ ಹೊಱುವವಂ (ವಹಿಕ Mr. 381). ಚನ್ನಾಗಿ ಹೊಱಲುಳ್ಳ ಕುದುರೆ (ವಿನೀತ, etc. Si. 272). ಆ ಹೆಂಗಸು ತಲೆಯ ಮೇಲೆ ಏನು ಹೊತ್ತುಕೊಂಡು ಬರುತ್ತಾಳೆ? (B. 1, 1). ಅಡವಿಯೊಳಗಿಹ ವೇಣು ತಿದ್ದಿದರೆ ಮೆಯ್ಗೊಟ್ಟು ಕಡುಹುಳ್ಳ ದೊರೆಗಳನ್ನು ಹೊಱವುತ (an unwarrantable form for ಹೊಱುತ) ಇಹುದು (Dp. 148). ಹೊಱ ಬಲ್ಲವನಿಗೆ ಆಳು ಬೇಡ, ಅಡ ಬಲ್ಲವನಿಗೆ ಹೆಣ್ಡತಿ ಬೇಡ. — ಮಣ್ಣು ಹೊಱುವವನು ತಲೆಗೆ ಬೆಣ್ಣೆ ಹಚ್ಚಿ ಕೊಣ್ಡನ್ತೆ. — ಲೆಕ್ಕದಿನ್ದ ಹೊತ್ತದಕ್ಕೂ ಮುಪ್ಪಿನಿನ್ದ ಸತ್ತದಕ್ಕೂ ದುಕ್ಕವೇನು? — ಬತ್ತ ಕತ್ತೆ ಹೊತ್ತರೆ ಅತ್ತ ಅಡಿಗೆ ಮಾಡಳೇ? — ಭರದಿನ್ದ ಹೋಗುವವನ ಸಂಗಡ ಹೊಱೆ ಹೊತ್ತಿಯಾ? ಅನ್ದ. — ಬಾವನಾದರೆ ಭಾರವಾದ ಹೊಱೆ ಹೊತ್ತಾನೇ? (Prvs.). see Bp. 10 sum.; 10, 6; 18, 51; 21, 8; 29, 18. 20; 30, 4; 44, 5; 50, 35; 55, 28; 57, 32.

**ಹೊಱೆ hoṟe.** = ಪೊಱೆ³. a load (for the head, as of wood, Bp. 30 sum., 30, 4; 38, 57; C.; B. 2, 30; as of leaves, B. 4, 42; etc.), a burden (in general). 2, the burden: bulk, etc. (ಮಾತ್ರೆ, ಪೊಱೆ Nn. 157). ತಲೆಹೊಱೆ (ವಿವಧ, ವೀವಧ, ಭಾರ, ಪರ್ಯಾಹಾರ Hlā.). ಬಣ್ಡಿಯ ಹೊಱೆ (ಆಚಿತ, ಶಾಕಟ ಭಾರ Nr.). ಹೊಱೆಯ ಹೊತ್ತು ಬದುಕುವವನು (ಭಾರೋಪಜೀವಿ Nn. 86). ಹೊಱೆ ಹೊತ್ತವನ ತುಱು ಮಱೆಯಾದರೆ ಹೋದೀತೇ? — ಬಱೀ ಮಾತಿನವ ಹೊಱೆ ಹೊತ್ತಾನೇ? — ಹತ್ತಱ ಹಲ್ಲ ಕಡ್ಡಿ ಒಬ್ಬನ ತಲೇ ಹೊಱೆ. [ಹೊಱೆ ಒಪ್ಪಿಸಿದ ಮೇಲೆ ಸುಂಕವೇ?] (Prvs.; see Prvs. s. ಸವದೆ, ಸವುದೆ & ಹೊಱು). ಹೊಱೆಯನ್ನು ಹೊಱುವ ಕರ್ಣಾಶ್ವ. (ಪೃಷ್ಠ್ಯ, etc. Si. 273); ಹೊಱೆಯನ್ನು ಹೊಱುವದಕ್ಕೆ ತಕ್ಕ ವಯಸ್ಸುಳ್ಳ ಚಲುವಾದ ಹೋರಿ (ಜಾತೋಕ್ಷ 319). see Sarpabhūṣaṇa s. ಮನ್ದರ. — ಹೊಱೆಗಟ್ಟು. -ಕಟ್ಟು. to tie into a load, to make a bundle of (Bp. 21, 8). — ಹೊಱೆಗಡಿ. -ಕಡಿ. to cut down to the full extent (Bh. 7, 17, 25). — ಹೊಱೆಯಾಳು. -ಆಳು. a porter, a carrier (Rām. 1, 16, 10).

**ಹೊಱೆಕಾಱ hoṟe-kāṟa.** a porter (ಭಾರವಾಹ, ಭಾರಿಕ Nr.).

**ಹೊರ್ಜಿ horji.** = ಹೊರಜಿ, etc. a stout and long rope, etc. (My.).

**ಹೊರ್ತು hortu.** = ಹೊಱತು. (C.; ಖುತೇ, ವಿನಹ G.). without, etc. ಇದಱ ಹೊರ್ತು ಓದುವ ಪುಸ್ತಕದೊಳಗಿನದೊನ್ದು ಪುಟ ಹಱಿದಿತ್ತು (B. 1, 23). ಇದಱ ಹೊರ್ತು ಮತ್ತೇನಾದರೂ ನಿನಗೆ ನೆನಪುಣ್ಟೋ? (3, 2). ಹಕ್ಕಿಗಳ ಹೊರ್ತು ಎರಡನೇ ಪ್ರಾಣಿಗಳಿಗೆ ಹೋಗಲಿಕ್ಕೆ ಬಾರದ ಗುಡ್ಡದ ತುದಿಯ ಮೇಲೆ ಸಹಾ ಅಡುಗಳು ಏಱುತ್ತವೆ (3, 10). ಕಬ್ಬಿನ ರಸದ ಹೊರ್ತು ತಾಳೇ ಮರದ ರಸದಿನ್ದಲೂ ಸಕ್ಕರೆಯನ್ನು ಮಾಡುತ್ತಾರೆ (3, 47). ಯಾರಾದರೂ ಬನ್ದು, ಈ ಮನೆ ತನ್ನಿನ್ದ ತಾನೇ ಆಗಿದೆ ಹೊರ್ತು ಮನುಷ್ಯ ನಿರ್ಮಿತವಲ್ಲೆನ್ದು ಹೇಱಿದರೆ ಸ್ವಲ್ಪವಾದರೂ ಅದನ್ನು ನಮ್ಬುವರೋ? (4, 58). ಚಿನ್ನವು ಸ್ವತಃಸಿದ್ಧ ಪದಾರ್ಥವೇ ಹೊರ್ತು ಮನುಷ್ಯನ ಕೃತಿಯಿನ್ದ ಉಣ್ಟಾಗದು (4, 107). ಮೂಱು ನಾಲ್ಕು ಗಱಿಗೆ ತೋಟದೊಳಗೆ ಓಡಾಡದ ಹೊರ್ತು ನನಗೆ ಹಸಿವೆಯಾಗುವದಿಲ್ಲ (4, 136). ಅನೇಕ ಜನರು ಚೆಲೋ ವಸ್ತ್ರಗಳನ್ನೂ ಮನೋಹರವಾದ ಪದಾರ್ಥಗಳನ್ನೂ ದೊರಕಿಸುವ ಸಲುವಾಗಿಯೇ ಬಹಳ ಕಷ್ಟ ಪಟ್ಟು ದ್ರವ್ಯಸಂಗ್ರಹ ಮಾಡುತ್ತಾರೆ ಹೊರ್ತು ಕದನ್ನ ಉರಟ ಅಱುವಿಗೋಸ್ಕರವಾಗಿ ಅಲ್ಲ (5, 76). ಆ ಪದಾರ್ಥಗಳು ಕಷ್ಟದ ಹೊರ್ತು ದೊರೆಯುವದಿಲ್ಲ (5, 77). ಕಾಱುಗಳನ್ನು ಸನ್ತೆಯೊಳಗೆ ಮಾಱುತ್ತಿರಲಾಗಿ ಬರುವಷ್ಟೇ ಬೆಲೆ ಬರುವದೇ ಹೊರ್ತು ಅದಱೊಳಗೇನೂ ಹೆಚ್ಚು ಕಡಿಮೆ ಆಗಲಿಕ್ಕಿಲ್ಲ (5, 121). ಆ ನಡುಗಡ್ಡೆಯಲ್ಲಿ ತೆಱಗೇ ಹೊರ್ತು ಬೇಕಾದಷ್ಟು ಭೂಮಿ ಹಾಗೆ ದೊರೆಯುತ್ತದೆ (5, 127). ಕಾಱನ್ನು ಅರೆಯುವ ಕೆಲಸವು ಅವನ ಹೊರ್ತು ಎರ್ಡನೆಯನ ರಿನ್ದ ಆಗುತ್ತಿದ್ದಿಲ್ಲ (5, 129). ಕೆಲಸದ ಹೊರ್ತು ಮತ್ತೇನೂ ನನಗೆ ಬೇಕಾಗಿಲ್ಲ (5, 132). ಇನ್ಥಾ ಮಾತುಗಳು ವಿದ್ವಾಂಸರ ಹೊರ್ತು ಉಱಿಕಿಯವರಿಗೆ ತಿಳಿಯುವದಿಲ್ಲ (5, 169). ದೀಕ್ಷೆ ಮಾಡಿದ ಹೊರ್ತು ಮೋಕ್ಷ ಬರಲಿಕ್ಕಿಲ್ಲ. — ನೀರು ಹಳ್ಳಕ್ಕೆ ಹೋದೀತೇ ಹೊರ್ತು ದಿನ್ನೆಗೆ ಹೋದೀತೇ? — ನೊಣ ಕೂತರೆ ವ್ರಣ ಹೊರ್ತು ಹೆಣ ಜೀವಿಸೀತೇ? — ಸಾಯಸವಾದರೂ ಆಯಾಸದ ಹೊರ್ತು ಸಿಕ್ಕದು. — ಪಿರಿಯಾದಿ ಮಾಡದ ಹೊರ್ತು ದಾಯಾದಿ ಕೇಳ. — ಹೊಟ್ಟೆಗೆ ತುಮ್ಬ ಹಣವಿದ್ದರೂ ಕಟ್ಟೆಗೆ ಹೊರ್ತು ಗತಿ ಇಲ್ಲ. — ಭೂತವಾದರೂ ಭುಕ್ತಿಗೆ ಹಾಕಿದ ಹೊರ್ತು ಭೀತಿ ತಪ್ಪದು. — ತೊಟ್ಟಿಲೊಳಗಣ ಕೂಸಾದರೂ ಅತ್ತ ಹೊರ್ತು ಹಾಲು ಕೊಡರು (Prvs.). — ಹೊರ್ತು ಮಾಡು. to except, to exempt (ವಿನಾಯಿಸು, ಬಿಡು G.).

**ಹೊರ್ದುಗೆ horduge.** = ಪೊರ್ದುಗೆ, etc. joining; that is appended: something subordinate or inferior (ಉಪಾಗ್ರ, ಉಪಸರ್ಜನ Hlā.).

**ಹೊಲ್ hol.** = ಪೊಲ್ 2, q. v. meanness, badness, etc. ಹೊಲ್ಲಾಗಿ ನುಡಿವವಂ (ಕದ್ವದ, ಗರ್ಹ್ಯವಾದಿ Hlā.; ಗರ್ಹ್ಯವಾದಿ Mr. 240). ಬ್ರಾಹ್ಮಣಿಕೆ ಹೊಲ್ಲ ಕೆಯ್ವುದು (ಅಬ್ರಹ್ಮಣ್ಯ, ಅವಧ್ಯ Hlā.). — ಹೊಲ್ಲಂ. -ಅಂ. — ಪೊಲ್ಲಂ. a mean, bad man. ಇಲ್ಲದ ಕಾಲಕ್ಕೆ ತಾ ಹೊಲ್ಲನವ ಜನರಿಂಗೆ; ಅಲ್ಲದ ಗುಣವುಳ್ಳ ಅರಸಿಂಗೆ, ಸಾಲಕ್ಕೆ ಕಲ್ಲೆದೆಯು ಬೇಕು (Sp.). — ಹೊಲ್ಲಹ. -ಅಹ. mean, bad, improper, disagreeable, etc. (Bp. 18, 40; 21, 14). ಹೊಲ್ಲಹ ನಾತ (ದುರ್ಗನ್ಧ): ಹೊಲ್ಲಹ ಬಟ್ಟೆ (ಕಾಪಥ, ವಿಪಥ, etc. Nr.). ಹೊಲ್ಲಹ ವಸ್ತು (ಅವರ, ಅಣಕ, ಪಸಸದ, ಅಧಮ Hlā.). — ಹೊಲ್ಲಹವನು. -ಅವನು. a mean, contemptible man (ಕಟ್ವರ, ಕುತ್ಸಿತ Hlā.).

**ಹೊಲ hola. 1.** = ಹೊಲೆ, etc. pollution, etc. — ಹೊಲಗೇರಿ. -ಕೇರಿ. = ಹೊಲೆಗೇರಿ. (My.). ಊರಿದ್ದ ಕಡೆ ಹೊಲಗೇರಿ. — ಊರು ಬಿಟ್ಟು, ಹೊಲಗೇರಿಯಲ್ಲಿ ತಂಗಿದರು (Prvs.).

**ಹೊಲ hola. 2.** = ಹೊಲಿದು. P. p. of ಹೊಲಿ, in ಹೊಲಕೊಳ್ಳು (C.; B. 5, 124).

**ಹೊಲ hola. 3.** = ಪೊಲ. a plough-field; a corn land (ವಲಜ, ಕ್ಷೇತ್ರ Si. 413; C.; Bp. 18, 12. 70; 60, 22. 23; Bh. 1, 8, 48; 3, 13, 16); etc. ಹೊಲ ಬಲ್ಲುದುದು (ಕಿಲ, ಸಮ್ಭಾವ್ಯ Nr.). ಹೊಲಕ್ಕೆ ಹೋದರೆ ಹುಲಿಯ ಕಾಟ, ಮನೆಗೆ ಬನ್ದರೆ ನುಸಿಯ ಕಾಟ. — ಹೊಲ ಹಚ್ಚಗಾಯಿತು, ಒಡೆಯನ ಕಣ್ಣು ಕೆಮ್ಪಗಾಯಿತು. — ಹೊಲವೆಲ್ಲ ಹಾಱಾಯಿತು, ಹಿಡಿಸೂಡಿಗೆ ಬಡಿದಾಟ. — ಹೊಲೆಯನ ನಮ್ಬಿ ಹೊಲವ ಹೊಗ ಬಾರದು, ಕುಳ್ಳನ ನಮ್ಬಿ ನೀರಿಗಿಱಿಯ ಬಾರದು. — ಹೊಲದ ಹತ್ತಿ ಹೊಲದಲ್ಲೇ! ನಿನಗೆ ಮೊಱ ಉದ್ದ, ನನಗೆ ನಾರು ಉದ್ದ ಅನ್ದ ಹಾಗೆ. — ಹೊಲಾ ಬಿತ್ತಿ ನೋಡು, ನೆಲಾ ಸಾರಿಸಿ ನೋಡು! — ನೇಗಲು ಉತ್ತರೆ ಹೊಲ, ಹಾಲು ಇದ್ದರೆ ಗೋವು. — ಪೋಲಿಯವನ ಹೊಲಕ್ಕೆ ಬೇಲಿ ಉಣ್ಟೇ? — ಫಲಾ ನೋಡದೆ ಕೆಟ್ಟಿತು, ಹೊಲಾ ಹೂಡದೆ ಕೆಟ್ಟಿತು. — ಬೇಲಿ ಎದ್ದು ಹೊಲ ಮೇಯುವಾಗ್ಗೆ ಕಾಯೋದು ಯಾರು? (Prvs.). — ಹೊಲ ಮಾಡು. to till the ground (C.; B. 5, 81). ಹೊಲ ಮಾಡುವವ (ಕರ್ಷಕ G.). — ಹೊಲದವರೆ. -ಅವರೆ. = ಅವರೆಬಳ್ಳಿ. a kind of beans. (St. & Pl.). — ಹೊಲವೋರೆ. a boundry, a limit (ಅವಧಿ, ಮರ್ಯಾದೆ, ಸೀಮು, etc. Hlā.; ಸೀಮೆ, ಆಘಾಟ Mr. 188). — ಹೊಲಹೊಲಸದಱಿಕ. (Rām. 5, 8, 50; ತಱಿಕ, a cutter ?).

**ಹೊಲಗೆ holage.** = ಹೊಲಿಗೆ. sewing, etc. (C.; B. 5, 294).

**ಹೊಲತಿ holati.** = ಪೊಲತಿ. a low-caste woman (Bp. 57, 57; My.).

**ಹೊಲಬಿಗ holabiga.** = ಪೊಲಮ್ಬಿಗ. a circumspective, clever man [ಹೊಲೆಯ ಹೊಲಬಿಗನಾದೊಡೆ ಅವನ ಹೊರೆಯಲಿಪ್ಪುದು ಲೇಸು ಕಣ್ಡಯ್ಯಾ Bv. 135]; (Bp. 35, 35).

**ಹೊಲಬು holabu.** = ಪೊಲಬು. a way; a manner, a mode, a circumstance (Bp. 25, 7; Rām. 3, 2, 20; Abhā. 1, 31); proper manner. [ಶೀಲದ ಹೊಲಬನಱಿಯದ ಭ್ರಮಿತ ಪ್ರಾಣಿಗಳು ನೀವು ಕೇಳಿ ಭೋ Cv. 496]. ಹೊಲಬನಱಿಯದ ಮಾತು ತಲೆಬಾಗಿಯೆದ್ದನ್ತೆ, ಹೊಲಬಱಿತು ಒನ್ದ ನುಡಿದರೆ ಆ ಮಾತು ಫಲಪಕ್ವದನ್ತೆ (Sp.). ಹೊಲಬನಱಿಯದ ಗುರುವು, ತಿಳಿಯಲಱಿಯದ ಶಿಷ್ಯ, ನೆಲೆಯನಾರಯ್ಯದು ಪದೇಶವಮ್ ಅನ್ಧಕನು ಕೊಳನು ಹೊಕ್ಕನ್ತೆ (Sp.). — ಹೊಲಬುಗಿಡು. -ಕಿಡು. = ಪೊಲಮ್ಬುಗಿಡು. the way (or direction) to be lost; to become bewildered (ದಿಗ್ಭ್ರಮಣ Śmd. Dh.). — ಹೊಲಬುಗೆಡಿಸು. -ಕೆಡಿಸು. to destroy the ways or rules: to transgress ad libitum (Bh. 5, 8, 14). — ಹೊಲಬುಗೆಡು. -ಕೆಡು. = ಹೊಲಬುಗಿಡು. [ಹೊಲಬುಗೆಟ್ಟ ಶಿಶು ತನ್ನ ತಾಯ ಬಯಸುವನ್ತೆ Bv. 365]; (Bp. 40, 26; Bh. 5, 41, 13). [— ಹೊಲಬುಗೊಳ್. -ಕೊಳ್. to go in the path. ಹೊಲಬುಗೊಣ್ಡಱಸಬೇಡ, ಬಿಲಿತು ತರ ಬೇಡ Bv. 180]. — ಹೊಲಬುದಪ್ಪು. -ತಪ್ಪು. = ಪೊಲಮ್ಬುದಪ್ಪು. (Dp. 158, 1; 146 pallavi; 155, 5).

**ಹೊಲಸ holasa.** = ಹೊಲಸು. (B. 5, 83. 205. 292).

**ಹೊಲಸತನ holasatana.** = ಹೊಲಸುತನ. (B. 5, 31).

**ಹೊಲಸು holasu.** = ಪೊಲಸು. nastiness; nasty matter, filth, impurity; dirtiness; nasty (ಅವಕರ, ಕಚ್ಚರ, ಮಲಿನ G.; C.; B. 1, 6; 3, 32; 4, 24. 225. 226; Dp. 54); disagreeableness (disagreeably, Bp. 4, 25). [ಕೊಲುವನೇ ಮಾದಿಗ, ಹೊಲಸು ತಿನ್ಬುವನೇ ಹೊಲೆಯ Bv. 590]. ಹಡಗದೊಳಗಿನ ಹೊಲಸು ತೆಗೆಯುವದಕ್ಕೆ ಮಾಡಿದ ಕಟ್ಟಿಗೆಯ ಗೋರೆ (ಅಭ್ರಿ); ಹೊಲಸು ನಾಱುವ ಹೆಣ (ಕುಣಪ G.). — ಹೊಲಸು ಮಾತು. an obscene word (My.).

**ಹೊಲಸುತನ holasutana.** the state of being nasty, impure, etc. (C.; B. 3, 31).

**ಹೊಲಿ holi.** = ಪೊಲ್ 1. to sew (Bp. 18, 29; 23, 3; C. Bp. 47, 46; C.; B. 5, 275). ಪಾದರಕ್ಷೆಗಳನ್ನು ಹೊಲಿಯುವವನು (ಪಾದೂಕೃತ್, etc. Si. 338). ದಾರದಿನ್ದ ಹೊಲಿಯಲ್ ಪಟ್ಟದು (ಊತ, ಸ್ಯೂತ, ಉತ 382). ಹೊಲಿಯುವವನ ಬಲಕ್ಕಿರ ಬೇಡ, ಆಟುವವನ ಎಡಕ್ಕಿರ ಬೇಡ (Prv.). ಹೊಲಿಯೋಣ (ಸೇವನ G.). [Tu. ಪೊಲ್ಲುನಿ].

**ಹೊಲಿಗೆ holige.** = ಪೊಲಿಗೆ, ಹೊಲಗೆ. connection (Ch. v. 19); sewing; needle-work (C.; B. 5, 146. 277). ಊತ ಸ್ಯೂತ ಎನ್ಬುವು ನೂಲನೆಯ್ಯುಯಲ್ಲಿಯೂ ಹೊಲಿಗೆಯಲ್ಲಿಯೂ ವರ್ತಿಸುಗು (Nr.).

**ಹೊಲಿಸು holisu.** to cause to sew, to have sewed (C.; B. 1, 26; 2, 7).

**ಹೊಲು holu.** P. p. of ಹೊಲಿ, in ಹೊಲು ಕೊಳ್ಳು (My.).

**ಹೊಲೆ hole.** = ಪೊಲೆ q. v., ಹೊಲ 1. the lochia (ರಜಸ್, ಪುಷ್ಪ, ಆರ್ತವ, ಮುಟ್ಟು Si. 188; My.). ಹೊಲೆ ಕೆಡಲು (ನಿಷ್ಕಲೆ Mr. 302). ಹೊಲೆಯಾದವಳು (ರಜಸ್ವಲೆ, ಸ್ತ್ರೀಧರ್ಮಿಣಿ, ಮಲಿನಿ, ಪುಷ್ಪವತಿ, ಋತುಮತಿ, ಉದಕ್ಯೆ Si. 188); ಹೊಲೆ ನಿನ್ತು ಹೋದ ಮುದಕಿಯನ್ನಾವಳು (ನಿಷ್ಕಲೆ, ವಿಗತಾರ್ತವೆ 188); ಹೆಂಗಳ ಹೊಲೆ (ರಜಸ್ 464). 2, taint, pollution, defilement; impurity; meanness, etc. (C.). [ಹೊಲೆಯುಣ್ಟೆ ಲಿಂಗವಿದ್ದೆಡೆಯಲ್ಲಿ ಕುಲವುಣ್ಟೆ ಜಂಗಮವಿದ್ದೆಡೆಯಲ್ಲಿ? Bv. 769; Cv. 847]. ಮುಟ್ಟಾದ ಹೊಲೆಯೊಳಗೆ ಹುಟ್ಟೋದು ಜಗವೆಲ್ಲ; ಮುಟ್ಟ ಬೇಡೆನ್ದು, ತೊಲಗುವ ಹಾರ್ವ ತಾ ಹುಟ್ಟಿದನೆಲ್ಲಿ? (Sp.). ಎಂಜಲು ಹೊಲೆಯಿಲ್ಲ, ಸಂಜೆಗತ್ತಲೆಯಿಲ್ಲ, ಅಂಜಿಕೆಯೆಮ್ಬ ಭಯವಿಲ್ಲ ಜ್ಞಾನವೆಮ್ಬ ಅಂಜನವಿರಲು (Sp.). ಜಂಗಮಕ್ಕೆ ಕುಲವಿಲ್ಲ, ಗಂಗೆಗೆ ಹೊಲೆಯಿಲ್ಲ. — ತೊಲೆಯಿನ್ದ ಹಲವಾಗುತ್ತದೆ, ಹೊಲೆಯಿನ್ದ ಭ್ರಷ್ಟವಾಗುತ್ತದೆ. — ನೆಲೆಯಿಲ್ಲದವನ ಮಾತು ಹೊಲೆಗಿನ್ತ ಹೆಚ್ಚು (Prvs.). — ಹೊಲೆಗಲಸು. -ಕಲಸು. to have oneself intermixed with pollution (of caste), to be defiled (Bp. 55, 6; 57, 38). 2, to defile (55, 9. 12). — ಹೊಲೆಗಿನ್ನರಿ. -ಕಿನ್ನರಿ. a vulgar lute, a lute of the Caṇḍālas (ಚಾಣ್ಡಾಲಿಕೆ, ಕಣ್ಡೋಲವೀಣೆ, ಚಣಾಲವಲ್ಲಕಿ Nr.). — ಹೊಲೆಗೆಡು. -ಕೆಡು. to be ruined by any pollution (as a house, My.). — ಹೊಲೆಗೇರಿ. -ಕೇರಿ. = ಹೊಲಗೇರಿ. a street of pollution or filth: a street or place where outcasts or Holeyas live (Bp. 30, 28; 49, 30; C.). — ಹೊಲೆಪಾಟು. a bad state or mode. see Śś. s. ಮೆಳ್. — ಹೊಲೆಮನ. an impure, base mind (Abhā. 2, 82). — ಹೊಲೆಮನೆ. a polluted house; a room appropriated to a woman in her courses (My.); a lying-in chamber (My.). — ಹೊಲೆಯ. ಅ 3. = ಪೊಲೆಯ, q. v. a low-caste man, a Holeya (ದಿವಾಕೀರ್ತಿ Hlā.; Mr. 479; ಚಣ್ಡಾಲ, ಪ್ಲವ, ಮಾತಂಗ, ದಿವಾಕೀರ್ತಿ, ಜನಂಗಮ, ನಿಷಾದ, ಶ್ವಪಚ, ಅನ್ತೇವಾಸಿ, ಚಾಣ್ಡಾಲ, ಪುಕ್ಕಸ Nr.; ದಿವಾಕೀರ್ತಿ, ಪೊಲೆಯ Nn. 152; Bp. 21, 44; 56, 49. 50; Bh. 8, 25, 40; 6, 3, 48; Dp. 24; C.; B. 5, 123). [ಹೊಲೆಯ ಹೊಲಬಿಗನಾದೊಡೆ ಅವನ ಹೊರೆಯಲಿಪ್ಪುದೇ ಲೇಸು Bv. 135]. ಕೊಲುವ ಕೆಯ್ಯೊಳು ಪೂಜೆ, ಮೆಲುವ ಬಾಯೊಳು ಮನ್ತ್ರ; ಸಲೆ ಪಾಪವೆರೆದ ಮನದೊಳು ಪೂಜಿಪನು ಹೊಲೆಯಗು ಕಷ್ಟ (Sp.). ಹೊಲೆಯನ ಪಾಯಸ ಹಾರುವನಿಗೆ ಯಾಕೆ? — ಹೊಲೆಯನ ನಮ್ಬಿ ಹೊಲವ ಹೊಗ ಬಾರದು, ಕುಳ್ಳನ ನಮ್ಬಿ ನೀರಿಗಿಱಿಯ ಬಾರದು. — ಹೊಲೆಯನ ಇಷ್ಟ ಉಪ್ಪಿನ ಕಾಯಿಯ ಕೇಡು. — ಹೊಲೆಯ ಹೊತ್ತು ಅಱಿಯ, ಕಬ್ಬಲಿಗ ಕಾರ್ಯ ಅಱಿಯ. — ಹಾರುವ ಮಾಡುವದು ಪಿಣ್ಡಕ್ಕೆ, ಹೊಲೆಯ ಮಾಡುವದು ಹೆಣ್ಡಕ್ಕೆ (Prvs.). — ಹೊಲೆಯರ ಕಾಗೆ. a raven (Pr.). — ಹೊಲೆಯರ ಹೊಲೆಯ. a very low Holeya (Bp. 56, 48). — ಹೊಲೆಯವ. -ಅವ. a nasty man (My.). 2, a Holeya (ಚಣ್ಡಾಲ etc. Si. 341; ಮಾತಂಗ 409). — ಹೊಲೆಯಾಗಿರು. -ಆಗಿ. -ಇರು. (a woman) to be in (her) courses (My.). — ಹೊಲೆಯಾಳು. -ಆಳು. a low-caste servant. ಹೊಲೆಯಾಳಿಗೆ ಒನ್ದು ಮನೆಯೊಳು ಸೆಱೆಯಾಯಿತು (Prv.). — ಹೊಲೆಯೂರು. -ಊರು. a nasty village (*i. e.* the yōni). see Prv. s. ಹುಟ್ಟು 1. — ಹೊಲೆ ಹೊರೆ. impurity to be attached (Bh. 6, 3, 48).

**ಹೊಲ್ಲ holla. 1.** = ಪೊಲ್ಲ. meanness, impropriety, etc. (Bp. 40, 47. 49; Bh. 7, 1, 9). [ಅಷ್ಟ ವಿಭೂತಿಯಿಲ್ಲದವರ ಮುಖ ಹೊಲ್ಲ Bv. 87; Cv. 1174]. ಅಳ ಹೊಲ್ಲ ಆಡಿನ, ಕೆಳೆ ಹೊಲ್ಲ ಕೋಡಗನ, ಅಱು ಕೋಪವೋಪರೊಳೆ ಹೊಲ್ಲ, ಮೂರ್ಖನ ಗೆಳೆತನ ಹೊಲ್ಲ (Sp.). ಬೇಡಂಗೆ ಕೊಡೆ ಹೊಲ್ಲ, ಆಡಿಂಗೆ ಮೞೆ ಹೊಲ್ಲ, ಬೇಡುವ್ಪಂಗೆ ಬೞಿ ಹೊಲ್ಲ, ದ್ವಿಜನಿಗೆ ನಾಡ ನುಡಿ ಸಲ್ಲ (Sp.). ಆಡಿ ಹುಸಿಯಲು ಹೊಲ್ಲ, ಕೂಡಿ ತಪ್ಪಲು ಹೊಲ್ಲ, ಕಾಡುವ ನೆಣ್ಟ ಬರ ಹೊಲ್ಲ, ಮಾನಿನಿಗೆ ನಾಡ ಮಾತ್ಹೊಲ್ಲ (Sp.). ಅಱುವು ಇರದಿರೆ ಹೊಲ್ಲ, ಕರಿಯು ಬೆದಱಲು ಹೊಲ್ಲ, ಅಱುಯದೂರೊಳಗಿರ ಹೊಲ್ಲ, ದೊರೆಗಳಿಗೆ ಸರಿಮಾತು ಹೊಲ್ಲ (Sp.). ಎನ್ತಪ್ಪನಾದರೂ ಮನ್ತ್ರಿಯಾ ಹಗೆ ಹೊಲ್ಲ; ಎನ್ತಕ್ಕುವಮ್ ಅರಸು ಮುನಿದರೆ ಆ ಮನ್ತ್ರಿಯನ್ತಕನಕ್ಕು (Sp.).

**ಹೊಲ್ಲ holla. 2.** (fr. ಪೊಲ್ 1. = ಹೊಲಿ). joining, uniting (T. ಪುಲ್ಲಲ್). — ಹೊಲ್ಲಾಹೊಲ್ಲಿ. (Śmd. 220, o. r. in Mdb. MS. ಹೊಲ್ಲಾಹೊಲ್ಲು). a close fight.

**ಹೊಲ್ಲಮೆ hollame.** = ಪೊಲ್ಲಮೆ, etc. badness, etc. (ಪ್ರತ್ಯವಾಯ Hlā.).

**ಹೊಲ್ಲಯಿಸು hollayisu.** to join (v. t.?). ಹೊಲ್ಲಯಿಸಿದಂ or ಹೊಲ್ಲೈಸಿದಂ (Śmd. 189).

**ಹೊಲ್ಲವೆ hollave.** = ಹೊಲ್ಲಮೆ, etc. (ಅಪಕಾರ, ದ್ರೋಹ Hlā.).

**ಹೊಲ್ಲಹ hollaha.** = ಹೊಲ್ಲಹು, ಹೊಲ್ಲೆಹ, ಹೊಲ್ಲೆಹು. badness, impropriety, contumeliousness; reproach, blame. ಇಲ್ಲದ ಹೊಲ್ಲಹವನ್ ಇಕ್ಕುವ (ಮಿಥ್ಯಾಭಿಯೋಗ, ಅಭ್ಯಾಖ್ಯಾನ Nr. *a*). (for another ಹೊಲ್ಲಹ see s. ಹೊಲ್).

**ಹೊಲ್ಲಹು hollahu.** = ಹೊಲ್ಲಹ, etc. ಇಲ್ಲದ ಹೊಲ್ಲಹಂ ಮೇಲಿಕ್ಕಿ ನುಡಿಹ (ಮಿಥ್ಯಾಭಿಶಂಸನ, ಅಭಿಶಾಪ Nr. *a*).

**ಹೊಲ್ಲಿಯ holliya.** (ಹೊಲ್ಲೆಯ). = ಪೊಲ್ಲೆಯ. badness, etc. see Kk. s. ಪೊಲ್ಲಣ.

**ಹೊಲ್ಲೆಹ holleha.** = ಹೊಲ್ಲಹ, etc. (ವಾರ್ತ Nn. 138; Bp. 38, 32; 47, 44; 51, 50; Bh. 2, 13, 35). — ಹೊಲ್ಲೆಹಗೆಯ್. to perpetrate bad, savage actions. ಹೊಲ್ಲೆಹಗೆಯ್ವವನು (ನೃಶಂಸ, ಕ್ರೂರಕರ್ಮ ಕೃತ್ Hlā.).

**ಹೊಲ್ಲೆಹು hollehu.** = ಹೊಲ್ಲಹ, etc. (Bh. 1, 8, 59; 3, 1, 28). ಇಲ್ಲದ ಹೊಲ್ಲೆಹನ್ ಇಕ್ಕುಹ (ಮಿಥ್ಯಾಭಿಯೋಗ, etc. Nr. *b*). ಹೊಲ್ಲೆಹ ಚರ್ಮ (ಶಿಪಿವಿಷ್ಟ Hlā.). ಇಲ್ಲದ ಹೊಲ್ಲೆಹಂ ಮೇಲಿಕ್ಕಿ ನುಡಿಹ (ಮಿಥ್ಯಾಭಿಶಂಸನ Nr. *b*).

**ಹೊಸ hosa. 1.** = ಒಸ, ಪೊಸ, q. v. newness, freshness, etc. (Bp. 43, 24; 47, 10; C.; B. 2, 4. 22. 37; ಅಪೂರ್ವ ಅಭಿನವ G.). — ಹೊಸ ಅಗಸ. a new washerman. ಹೊಸ ಅಗಸ ಗೋಣೀ ಒಗದ (Prv.). — ಹೊಸ ಅತ್ತೆ. a new mother-in-law. ಹೊಸ್ತಲು ದಾಟುವಾಗಲೇ ಹೊಸ ಅತ್ತೆಯನ್ನ ತರ ಬೇಕನ್ದ ಹಾಗೆ (Prv.). — ಹೊಸ ಒಲುಮೆ. new or novel love (Bp. 27, 7). — ಹೊಸ ಕಣೆ. a new arrow (J. 13, 20). — ಹೊಸ ಗತಿ. a novel way (J. 22, 46). — ಹೊಸ ತುಪ್ಪ. fresh ghee (ಹೈಯಂಗವೀನ Hlā.). — ಹೊಸ ನೀರು. fresh water, *i. e.* water lately come into a tank or that day brought home (C.). ಹೊಸ ನೀರು ಬನ್ದು, ಹಟೇ ನೀರು ಕೊಚ್ಚಿ ಕೊಣ್ಡು ಹೋಯಿತು (Prv.). — ಹೊಸ ಪೇಟೆ. a new market-place; N. (My.). — ಹೊಸ ಬಟ್ಟೆ. new cloth (ಅನಾಹತ, etc. Si. 221). — ಹೊಸ ಬೆಣ್ಣೆ. fresh butter (Bp. 42, 2). — ಹೊಸ ಮಡಿ. newly washed clothes (Bp. 21, 9). — ಹೊಸ ಮಡಿಕೆ. a new vessel (Bp. 55, 29). — ಹೊಸ ಮನೆ. a new house (Dp. 4). ಹೊಸ ಮನೆ ಹೊಗುಂತ್ತಾ ಕಾಗೆ (that has a bad omen) ಕೊಂಕುಟಲ್ಲಿ ಇಟ್ಟು ಕೊಣ್ಡ ಹಾಗೆ (Prv.). — ಹೊಸ ಮಸೆ. = ಪೊಸ ಮಸೆ, q. v. (Bh. 6, 2, 6). — ಹೊಸ ಮಾತು. a new word; news (My.). — ಹೊಸ ಮೋಹ. new (not old) love. ಹಲ್ಲ ಮೇಲಿನ ಕೆಮ್ಮು, ಕಲ್ಲ ಮೇಲಿನ ಹಂಸೆ, ಮಲ್ಲಿಗೆಯರಳ ತನಿಗಮ್ಪು, ಹೊಸ ಮೋಹ ನಿಲ್ಲವು; ನೋಡು! (Sp.). — ಹೊಸ ರೊಟ್ಟಿ. fresh bread (B. 3, 111). — ಹೊಸ ನರ. a new gift (Bp. 23, 13). — ಹೊಸ ವಸ್ತ್ರ. new cloth (ನೂತನಾಮ್ಬರ Nn. 27). — ಹೊಸ ವೈದ್ಯ. a new doctor. ಹೊಸ ವೈದ್ಯನಿಗಿನ್ತ ಹಟೇ ರೋಗಿ ವಾಸಿ (Prv.). — ಹೊಸ ಸೀರೆ. new cloth, a new garment (ಅಹತ Hlā.; ಅನಾಹತ, ನವಾಮ್ಬರ, etc. Nr.). — ಹೊಸ ಹೊಸ. rep. (B. 2, 22. 40; 3, 90).

**ಹೊಸ hosa. 2.** P. p. of ಹೊಸೆ 1, in ಹೊಸ ಹೊಸದು (Bp. 14, 17; 18, 28).

**ಹೊಸ hosa. 3.** P. p. of ಹೊಸೆ 2, in ಹೊಸ ಹೊಸದು (Bp. 16, 21; 57, 18).

**ಹೊಸಕು hosaku.** = ಉಸಿಕು, ಉಸಿಗು, ಉಸುಕು 2, ಒಸಗು, ಹೊಸಗು. to rub anything between the hands or with the foot (My.; *cf.* ಹೊಸೆ 1).

**ಹೊಸಗು hosagu.** = ಹೊಸಕು, etc. (My.).

**ಹೊಸಗೆ hosage. 1.** = ಒಸಗೆ 1, ಒಸಿಗೆ, ಪೊಸಗೆ, ಹೊಸಿಗೆ 1. joy, etc. (My.). 2, = ಖುತುಶಾನ್ತಿ. a ceremony (My.).

**ಹೊಸಗೆ hosage. 2.** = ಒಸಗೆ 2, ಹೊಸಿಗೆ 2. report, news, tidings (My.).

**ಹೊಸತಿಲು hosatilu. ಹೊಸೆತಿಲ್.** = ಪೊಸನ್ತಿಲ್. etc. a door-sill, a threshold (ಗೃಹಾವಗ್ರಹಣಿ, ದೇಹಲಿ Hlā.; ದೇಹಲಿ Mr. 199). — ಹೊಸತಿಲುಗನ್ನ. -ಕನ್ನ. a hole made by burglars under a threshold (Bp. 31, 5).

**ಹೊಸತು hosatu.** = ಪೊಸತು 1, etc. that which is new, fresh, novel, etc.; newness, etc. (ನವ್ಯ, ನವ, ನವೀನ, ನೂತನ, ಅಭಿನವ, ನೂತ್ನ Hlā.; Bp. 25, 27; 26, 53; 32, 22; 38, 52; 47, 18; 60, 19; Bh. 6, 2, 1; My.). [ನಾಗಂಗೆ ಹೊಸತನಿಕ್ಕಿಹೆವೆಮ್ಬರು ನಾಗ ಬನ್ದರೆ ಕೋಲ ಕಳೆದುಕೊಮ್ಬರು Bv. 195]. ಹೊಸತಾಗಿ ಮೂಡಿದ ಮೊಳೆ (ಅಂಕುರ); ಹೊಸತಾಗಿ ಹೊಟ ಹೊಮ್ಮಿದ ಪತ್ರ ಪುಷ್ಪ ಫಲಾದಿಗಳ ಗೊಂಚಲು (ವಲ್ಲರಿ, ಮಂಜರಿ Nr.). ಹೊಸತಾಗಿ ಮೊಲತ ಮೊಳಕೆ (ಅಂಕುರ Si. 119); ಹೊಸತಾದದು (ಶಾರದ 431). ಹೊಸತು ಮ್ಯೆಯ್ಯಲ್ಲಿ, ಹಟತು ಹಗ್ಗದಲ್ಲಿ (Prv.). — ಹೊಸತು ಹೊಸತು. rep. (Bp. 8, 43).

**ಹೊಸದು hosadu. 1.** = ಹೊಸತು, etc. (ಪ್ರತ್ಯಗ್ರ, ಅಭಿನವ, ನವ್ಯ, etc. Si. 374; C.). ಹಟದು ಮಾಟ ಹೊಸದಿಲ್ಲ, ಬಿಳಿದು ಮಾಟ ಬಣ್ಣವಿಲ್ಲ (Prv.). — ಹೊಸ ಹೊಸದು. rep. (B. 5, 269). ಆಗಾಗ್ಯೆ ಹೊಸ ಹೊಸದಾಗಿ ಪ್ರಕಾಶಿಸುವ ಪ್ರಜ್ಞೆಯುಳ್ಳವನು (ಪ್ರಗಲ್ಭ, etc. Si. 359).

**ಹೊಸದು hosadu. 2.** P. p. of ಹೊಸೆ 1, in ಹೊಸ ಹೊಸದು. see Bp. s. ಹೊಸ 2.

**ಹೊಸದು hosadu. 3.** P. p. of ಹೊಸೆ 2 (My.; see Bp. s. ಹೊಸ 3).

**ಹೊಸಬ hosaba.** = ಪೊಸಮ್ಬ. a new man (Bp. 21, 20; C.; B. 4, 157; 5, 48).

**ಹೊಸಬಿಗ hosabiga.** a wonderful man (Bh. 7, 4, 2).

**ಹೊಸಲು hosalu.** = ಒಸಲು, ಹೊಸತಿಲು, etc. a threshold. (My.).

**ಹೊಸಿಗೆ hosige. 1.** = ಹೊಸಗೆ 1, etc. joy, etc. (My.). — ಹೊಸಿಗೆಪ್ರಸ್ತ. = ಋತುಶಾನ್ತಿ (My.). — ಹೊಸಿಗೆಬಾಗಿಣ. distribution of cakes at the ಋತುಶಾನ್ತಿ (My.).

**ಹೊಸಿಗೆ hosige. 2.** = ಹೊಸಗೆ 2, etc. report, etc. (My.).

**ಹೊಸಿಲು hosilu.** = ಹೊಸಲು, etc. (My.).

**ಹೊಸೆ hose. 1.** = ಪೊಸೆ 1. to churn; to rub, to generate fire by friction. P. ps. ಹೊಸದು, ಹೊಸೆದು. ಕಿಚ್ಚ ಹೊಸೆವ ಕೋಲು (ಅರಣಿ Hlā.). ಯಾಗಾಗ್ನಿಯ ಹೊಸೆವ ಮರಂ (ಅರಣಿ Nr.). ಹೊಸವ ಕೋಲ್ (Bp. 18, 28). ಹಸಿಯ ಸಮಿಧೆಯ ತನ್ದು ಹೊಸದರುಣ್ಟೇ ಕಿಚ್ಚು? ವಿಷಯಗಳುಳ್ಳ ಮನುಜಂಗೆ ಗುರುಕರುಣ ವಶವರ್ತಿಯಹುದೇ? (Sp.).

**ಹೊಸೆ hose. 2.** = ಪೊಸೆ 3. to twist, etc. (C.; Bp. 42, 2; B. 2, 42). P. ps. ಹೊಸದು, ಹೊಸೆದು, ಹೊಸ್ತು. [ಮಳಲ ಹೊಸೆದರೆ ಹೊಸೆದನ್ತಲ್ಲದೆ ಸರವಿಯು ಹಡೆಯಲುಬಾರದು Bv. 552].

**ಹೊಸ್ತಲ hostala.** = ಹೊಸ್ತಲು. (G. 72. 189. 270. 499).

**ಹೊಸ್ತಲು hostalu.** = ಹೊಸತಿಲು, etc. a threshold. (B. 4, 199). ಬಾಗಿಲ ಹೊಸ್ತಲು (ಗೃಹಾವಗ್ರಹಣಿ, etc. Si. 110). ಹೊಸ್ತಲು ದಾಟುವಾಗಲೇ ಹೊಸ ಅತ್ತೆಯನ್ನ ತರ ಬೇಕನ್ದ ಹಾಗೆ (Prv.).

**ಹೊಸ್ತಿಲು hostilu. ಹೊಸ್ತಿಲ್.** = ಹೊಸತಿಲು, etc. (ಗೃಹಾವಗ್ರಹಣಿ, ದೇಹಲಿ Nr.; J. 5, 68; My.). ಪ್ರಸ್ತಪ್ರಯೋಜನವಿದ್ದರೆ ಹೊಸ್ತಿಲಲ್ಲೇ ಕಾಣುವದು (Prv.).

**ಹೊಸ್ತು hostu. 1.** = ಹೊಸತು, etc. that is new, etc.; newness, etc. (My.; ಪ್ರತ್ಯಗ್ರ, etc. Si. 374). ಹೊಸ್ತಾಗಿದ್ದದು

(ನೂತನ, etc. Dhw.). ಹೊಸ್ತಿನಲ್ಲಿ ಅಗಸ ಗೋಣಿಯೇ ಒಗೆದ, ಹಬಿದಾದರೆ ಬಟ್ಟೆ ಒಗೆಯುವದೇ ಪ್ರಯಾಸ (Prv.; *cf.* the Prv. s. ಹೊಸ ಅಗಸ).

**ಹೊಸ್ತು hostu. 2.** [first use of the new harvest].

**ಹೊಳ hoḷa.** = ಹೊಳೆದು, ಹೊಳೆದು. P. p. of ಹೊಳೆ 1, in ಹೊಳ ಹೊಳೆ (Bp. 27, 23; Rām. 3, 6, 43; Bh. 1, 17, 10; J. 2, 40; 6, 10; 11, 10; 15, 10).

**ಹೊಳಕಿಸು hoḷakisu.** to cause to appear (Rām. 6, 54, 27).

**ಹೊಳಕು hoḷaku. 1.** to make one's appearance, to appear, to become manifest (Bp. 1, 7, 32; Rām. 3, 6, 43. 58; 3, 7, 15; 6, 11, 2; 6, 30, 14; 6, 50, 28).

**ಹೊಳಕು hoḷaku. 2.** lustre, shine (*cf.* ಪೊಳಕು?). ಬೆಳಕು ಇಲ್ಲದೆ ಹೊಳಕು ಕಣ್ಡೀತೇ? (Prv.).

**ಹೊಳಚು hoḷacu.** to pare off (Bp. 43, 25; see s. ಉಳಿ 4). 2, to peep, to stare (Dp. 107, 3).

**ಹೊಳತೆ hoḷata.** lustre, shine (My.).

**ಹೊಳದು hoḷadu.** = ಹೊಳೆದು. P. p. of ಹೊಳೆ 1. (Bp. 27, 23; 25, 5).

**ಹೊಳಪಿಸು hoḷapisu. 1.** = ಪೊಳಯಿಸು, ಹೊಳಿಸು. to brandish (as a sword, My.).

**ಹೊಳಪಿಸು hoḷapisu. 2.** to make bright, to scour, to furbish (My.).

**ಹೊಳಪು hoḷapu.** = ಪೊಳಪು 1, etc. radiance, etc. (C.; B. 4, 124. 225). ಬಹಳ ಹೊಳಪು (ಸುಷಮೆ, ಪರಮಶೋಭೆ Si. 32).

**ಹೊಳಲೆ hoḷale.** = ಒಳಲೆ. (My.). a kind of shell used in feeding children.

**ಹೊಳವು hoḷavu.** = ಹೊಳಪು. (My.).

**ಹೊಳಸು hoḷasu.** = ಪೊಳಯಿಸು, etc. to cause to roll, to cause to welter (Bh. 3, 18, 14); to cause to move about or to and fro (6, 3, 2).

**ಹೊಳಹು hoḷahu. 1.** = ಪೊಳಪು, etc. radiance, etc. (ಸ್ಫುರಣ, ಸ್ಫರಣ Nr.; Rām. 3, 4, 25; J. 12, 20; 30, 10; Bh. 1, 15, 19; 6, 2, 6). — ಹೊಳಹುಗಿಡು. -ಕಿಡು. radiance to be destroyed: to become gloomy (ನಿಃಪ್ರಭ Nr.). — ಹೊಳಹು ನುಡಿ. bright, cheering speech (ಶಾನ್ತ Mr. 84).

**ಹೊಳಹು hoḷahu. 2.** = ಪೊಳಪು 2. a swing, a hammock (ಪ್ರೇಂಖ, ಪೊಳಪು Nr. 129).

**ಹೊಳಹು hoḷahu. 3.** the neck of a lute. ವೀಣೆಯ ಹೊಳಹು (ಪ್ರವಾಲ, ವಿಪಂಚಿ Nn. 7).

**ಹೊಳಿವಿಕೆ hoḷivike.** shining, shine (Cb. 106).

**ಹೊಳಿಸು hoḷisu.** = ಹೊಳಪಿಸು 1, etc. ಕತ್ತಿಯನ್ನು ಹೊಳಿಸು (ಝಳಪಿಸು G.).

**ಹೊಳೆ hoḷe. 1.** = ಪೊಳೆ 1. to be radiant or bright, to shine (Bp. 18, 2; 26, 13; 32, 6; 61, 66; Rām. 1, 13, 6; 6, 30, 9; Bh. 4, 4, 36; 6, 3, 18; J. 13, 51; C.; Si. 176; B. 1, 18). P. ps. ಹೊಳದು q. v., ಹೊಳೆದು. ಹೊಳವ ಅರಳೆಲೆ (Prll. 3, 25).

**ಹೊಳೆ hoḷe. 2.** = ಪೊಳೆ 2. to roll: to fail (as a promise, J. 4, 2).

**ಹೊಳ್ಳಿಸು hoḷḷisu.** = ಹೊರಳಿಸು, etc. to cause to roll (v. t., My.); to roll (v. t., My.). 2, to cause to escape one's grasp (Bh. 6, 4, 34; 7, 4, 54).

**ಹೊಳ್ಳು hoḷḷu. 1.** = ಪೊಳ್ಳು, q. v. hollowness; etc. 2, a worthless person (Bp. 21, 40; 56, 20). ಮರನ ಹೊಳ್ಳು (Bh. 1, 19, 23. 25). — ಹೊಳ್ಳಾಗು. -ಆಗು. to become worthless or vain (as abstract meditation, Bh. 3, 5, 21); to become hollow or empty (My.). — ಹೊಳ್ಳೀಜಿತ. -ಇಜಿತ. the dealing out of harmless blows (Bh. 1, 13, 5). — ಹೊಳ್ಳುಕಣೆ. a hollow, strengthless arrow (Bh. 8, 23, 44). [— ಹೊಳ್ಳುಕುಟ್ಟು. to pound worthless thing, chaff. ಹೊಳ್ಳುಕುಟ್ಟಿ ಕೈಹೊಟ್ಟೆಯಾದನ್ತಾಯಿತ್ತಯ್ಯಾ Bv. 552]. — ಹೊಳ್ಳುಗಳೆ. -ಕಳೆ. = ಪೊಳ್ಳುಗಳೆ. to despise, to scorn. ಜಳ್ಳು ಮಾತಿನಿನ್ದ ಹೊಳ್ಳುಗಳೆಯುತ್ತಾನೆ (Prv.). 2, to deprive of strength (Bh. 8, 23, 19). — ಹೊಳ್ಳುವಾತು. -ಮಾತು. = ಪೊಳ್ಳು ಮಾತು. an empty, vain word (Bh. 8, 22, 27). — ಹೊಳ್ಳುವಾಱು. -ಪಾಱು. to run about to no purpose (Bh. 1, 14, 34); to fly fruitlessly (8, 25, 17). [— ಹೊಳ್ಳುಹಾಱು. = ಹೊಳ್ಳುವಾಱು. ತಲಹಿಲ್ಲದ ಕೋಲು ಹೊಳ್ಳು ಹಾರುವುದಲ್ಲದೆ ಗುಱಿಯ ತಾಗಬಲ್ಲುದೇ? Bv. 202]. — ಹೊಳ್ಳೆದೆ. -ಎದೆ. cowardice (J. 23, 10). — ಹೊಳ್ಳೆಳ್ಳು. -ಎಳ್ಳು. barren sesamum (ತಿಲಪಿಂಜ, ತಿಲಪೇಜ, ಷಣ್ಡತಿಲ (Hlā., Nr.).

**ಹೊಳ್ಳು hoḷḷu. 2.** = ಹೊರಳು, etc. to roll, etc. (My.). — ಹೊಳ್ಳಾಡು. -ಆಡು. to roll about (v. i.) etc. ಜೊಳ್ಳುಮನುಜರು ತಾವು ಸುಳ್ಳುಸಂಸಾರದೊಳು ಮಳ್ಳಿಡಿದು, ಮಾಯೆಯೆಮ್ಬುವಳ ಬಲೆಯೊಳು ಹೊಳ್ಳಾಡುತಿಹರು (Sp.).

**ಹೊಳ್ಳುಗ hoḷḷuga.** = ಹೊಳ್ಳೆಗ. a man destitute of strength, a weak man (Bh. 8, 24, 40).

**ಹೊಳ್ಳೆ hoḷḷe. 1.** = ಹೊರಳೆ 1. a nostril (C.; B. 4, 83).

**ಹೊಳ್ಳೆ hoḷḷe. 2.** = ಒಳ್ಳೆ 2. — ಹೊಳ್ಳೆಹಾವು. a kind of amphisbaena (My.).

**ಹೊಳ್ಳೆಗ hoḷḷega.** = ಹೊಳ್ಳುಗ. (J. 4, 21).

**ಹೊಳ್ಳೆಯ hoḷḷeya.** this appears to be a mistake for ಹೊಲ್ಲೆಯ (ಹೊಲ್ಲಿಯ) in Bh. 4, 10, 35.

**ಹೊೞಲ್ hoḻal. ಹೊೞಲು.** = ಪೊೞಲ್, etc. a town (Bp. 40, 36; 57, 47; Rām. 3, 2, 16; 6, 53, 6).

**ಹೊೞೆ hoḻe.** = ಪೊೞೆ 1. a river (ನದಿ Nn. 11. 40; C.). ಹೊೞೆಯ ವೇಗ (ಸ್ರೋತಸ್ Si. 465). ಹೊೞೆಯ ನೀರಿಂ ಬೆಳವ ಮಹಿ (ನದೀ ಮಾತೃಕ Mr. 94). ಹೊೞೆ ದಾಟಿದ ಮೇಲೆ ಅಮ್ಬಿಗನ ಮಿಣ್ಡ. — ಹೊೞೆಗೆ ಹಾಕುವದಾದರೂ ಅಳೆದು ಹಾಕ ಬೇಕು. — ಹೊೞೆಗೆ ಇಱಿದ ಮೇಲೆ ಚಳಿಯೇನು? ಮೞೆಯೇನು? — ಹೊೞೆಗೆ ನೆನೆಯದ ಕಲ್ಲು ಮೞೆಗೆ ನೆನದೀತೇ? — ಹೊೞೇ ಪರ್ಯನ್ತರ ಓಟ, ದೊರೇ ಪರ್ಯನ್ತರ ದೂಱು. — ಹೊೞೆ ಮೂಗಾವದ, ಅನ್ನ ಕೆರಾ ಕಳಚುವದುಣ್ಟೇ? — ಹೊೞೇ ನೀರಿಗೆ ದೊಣ್ಣಪ್ಪನಾಯಕನ ಅಪ್ಪಣೆಯೇ? — ಮೞೆಗೆ ಹೆದಱಿ, ಹೊೞೆಯಲಿ ಹಾಱಿದ ಹಾಗೆ (Prvs.). ಹೊೞೆಯ ನೀರೊಬ್ಬನೇ ಅಳೆಯ ಬಹುದೆನ್ದರೇ ಅಳೆಯ ಬಹುದೆನ್ದು ಎನ ಬೇಕು; ಮೂರ್ಖನ ಕಳೆಯಲಳವಲ್ಲ (Sp.). — ಹೊೞೆಚುಳ್ಳಿ. a spinous shrub growing in salt marshes, the holly-leaved acanthus, Acanthus ilicifolius Lin. (St. & Pl.). — ಹೊೞೆನೆಕ್ಕಿಮರ. = ನಾಱುಮ್ಬೇಳೆಮರ. (St. & Pl.). — ಹೊೞೆದಾಸಾಳದ ಮರ. a valuable timber tree with showy purple flowers, Lager-stroemia flos reginae Retz. — ಹೊೞೆ ಹಳ್ಳ. dupl. (G. 106; 5, 298).

**ಹೋ hō. 1.** = ಪೋ, q. v. going, etc. — ಹೋಗಾಲ. -ಕಾಲ. the time of going or going away: death (My.). [Tu. ಪೋಕಾಲೊ].

**ಹೋ hō. 2.** = ಹೋ. a common particle used in stopping (ನಿವಾರಣಾರ್ಥ Śmd. 393; ಹಾ, ನಿಲಿಸುವದು, ಬೇಡೆಮ್ಬುದು Nn. 140; Bp. 9, 32; 55, 52; Śsv. 1, 79 va.), in rejoicing (Bp. 17, 14), in fear (26, 28), in pain (38, 10) or sorrow (50, 7). — ಹೋಯೆನ್. -ಎನ್. to utter ಹೋ (Bp. 28, 60. 63). — ಹೋ ಹೋ. rep. (Bp. 8, 17; 22, 30; 44, 10; 52, 13).

ಹೋ hō. a particle used in calling (Sk.; ಸಮ್ಬೋಧೆ Mr. 537), challenging (Sk.), surprise (Sk.), and remembering (ಸ್ಮರಣೆ 537).

**ಹೋಕ hōka.** = ಪೋಕ, q. v. a goer, etc. see ತಲೆ-, ತಿಣ್ಣೆ-, ದಾರಿ-, ಹಾದಿ-.

**ಹೋಕು hōku.** going; the state of anything being gone: a defect, a fault (My.; T. ಪೋಕ್ಕು). ಹೋಕಿಲ್ಲದ ಕೆಲಸ ನಾಕ ದಲ್ಲಿಯೂ ಬೇಕು (Prv.).

**ಹೋಕೆ hōke.** going: a way, a passage, a means (My.; Te. ಓಕ, ಪೋಕು, ಪೋಕೆ; T. ಪೋಗ್ಗೈ; M. ಪೋಕ್ಕು).

**ಹೋಗಿಸು hōgisu.** = ಪೋಗಿಸು. to cause to go, etc. (My.).

**ಹೋಗು hōgu. 1.** = ಪೋಗು 1 q. v., etc. to go; etc. (C.); to go on (Bp. 50, 49); to go near, to embrace sexually (see Sp. below). ಹೋಗ ಬಾರದುದು (ಗಹನ, ಕಲಿಲ); ಹೋಗ ಬಾರದ ಬಟ್ಟೆ (ಕಾನ್ತಾರ, ದುರ್ಗ Nr.). ಹೋಗ ಬಾರದನ್ತಾದು (ಅಕ್ಷರ, ಅಸಂಗತ Nn. 75). P. p. ಹೋಗಿ (C.); relative P. p. ಹೋದ; relative present participle ಹೋಗುವ (C.), ಹೋಪ (Bp. 28, 37; 45, 34), ಹೋಹ q. v.; 3rd person singular imperfect ಹೋಯಿತು (C.), ಹೋಯಿತ್ತು (Bp. 14, 9), ಹೋಯ್ತು (C.); 3rd person imperative ಹೋಗಲಿ (Bp. 51, 30; C.); 2nd person plural imperfect once ಹೋದಿರ್ (Bp. 23, 36, instead of the old form ಹೋದಪಿರ್). in *common* language ಹೋಗು is frequently joined to a P. p. ಅವದಿರು ಬೆನ್ದು ಹೋದರು (Bh. 1, 8, 89). ಎಚ್ಚರಿಕೆ ತಪ್ಪಿ ಹೋಗುವದು (ಪ್ರಮಾದ, etc. Si. 71); ಹಡಗು ದಾಟಿ ಹೋದದು (ಅತಿನೌ 85); ರೋಗದಿನ್ದ ದುರ್ಬಲನಾಗಿ ಬೊಗ್ಗಿ ಹೋದವನು (ನ್ಯುಬ್ಜ 203); ಸತ್ತು ಹೋದವನು (ಮೃತ 243); ಸೋತು ಹೋದವನು (ಪರಾಜಿತ, etc. 296); ಸೀದು ಹೋದ ಅನ್ನ (ಭಿಸ್ಸಟೆ, etc. 315); ಕಳದು ಹೋದದು (ಪ್ರಾಕ್ 475). — ದಾಸಿಯನು ಹೋಗುವಗೆ ವೀಸ ಹತ್ತದು ಕೆಯ್ಗೆ, ಹೇಸಿ ತೊಲಗುವಳು ಜಯಲಕ್ಷ್ಮಿ, ಆಯುಷ್ಯ ನಾಶವಾಗುವದು (Sp.). ಹೋಗು! ಅಪ್ಪೋದಿಲ್ಲ, ಹೊಗೆ ಹಾಕುತ್ತೇನೆ. — ಹೋಗದಿದ್ದ ಊರಿಗೆ ಆಗದಿದ್ದ ಚೀಟು. — ಹೋದ ಪುಟ್ಟ, ಬನ್ದ ಪುಟ್ಟ, ಪುಟ್ಟನ ಕಾಲಿಗೆ ನೀರಿಲ್ಲ. — ಹೊದರೆ ಕಾಶಿ, ಇಲ್ಲದಿದ್ದರೆ ಗಾಸಿ, ಇದ್ದರೆ ವಾಸಿ. — ಹೋದರೆ ಒನ್ದು ಕಲ್ಲು, ಬನ್ದರೆ ಒನ್ದು ಹಣ್ಣು. — ಹೋದ ಒಡವೆ ಹೊಆಡದು. — ಹೋದೆಯಾ, ಪೀಡೆ? ಅನ್ದರೆ ಬನ್ದೆ ಬೆಳಕಿನ ಕಣ್ಡಿಯಿನ್ದ. — ಭ್ರಾನ್ತಿ ಹೋದರೂ ಭಯ ಹೋಗಲಿಲ್ಲ. — ಮುಚ್ಚಿ ಇಟ್ಟರೆ ಹುಚ್ಚು ಹೋದೀತೇ? — ಮುಳ್ಳುಮೊನೆ ಯಷ್ಟು ಆಸ್ಪದ ಕೊಡದವನ ತಳ್ಳಿಗೆ ಹೋಗಬೇಡ. — ಮಾತು ಬನ್ದಾಗ ಸೋತು ಹೋದವನೇ ಜಾಣ (Prvs.). — ಹೋಗಗೊಡು. -ಕೊಡು. to allow or permit to go (C.; B. 5, 85. 194). — ಹೋಗ ಬರು. to go and come (B. 5, 226). — ಹೋಗ ಬಿಡು. to let go (Bp. 59, 13; 60, 15. 25). — ಹೋಗಲಾಡಿಸು. -ಆಡಿಸು. to remove; to make away with, to destroy, to kill; to dissipate (My.; Si. 225. 297. 352). ಇದ್ದದ್ದು ಹೋಗಲಾಡಿಸಿದ್ದಲ್ಲದೆ ಕಲಿತ ಬುದ್ಧಿಯಲ್ಲಾ (Prv.). — ಹೋಗಲಾಡು. -ಆಡು. to let go; to lose; to dissipate; to retract (a word), to fail in (a promise, My.). — ಹೋಗಲೀಸು. -ಈಸು. = ಹೋಗಗೊಡು. (My.). — ಹೋಗ ಹೋಗು. = ಹೋಗು ಹೋಗು. (Bp. 18, 4; B. 5, 305). — ಹೋಗಾಡಿಸು. -ಆಡಿಸು. = ಹೋಗ ಲಾಡು. (My.). ಮಕ್ಕಳ್ಗೆ ಹೋದ, ಮದೀನಕ್ಕೆ ಹೋದ, ಇದ್ದ ಮಕ್ಕ ಳನ್ನು ಹೋಗಾಡಿಸಿ ಬನ್ದ (Prv.). — ಹೋಗಾಡು. -ಆಡು. to throw away, to scatter, to squander, to dissipate (ಪ್ರಮಾದತ್ಯಜನ Śmd. Dh.; My.; Mhr. ಹೋಗಾಡಣೇಂ). ಉದ್ದು ರುಟಿಮ ಮಾತಾಡಿ, ಇದ್ದವನು ಹೋಗಾಡಿ, ಉದ್ದ ಮರದ ತುದಿಯನೇಱಿ, ಕೆಯ್ ತಪ್ಪಿ ಬಿದ್ದು ಸತ್ತನ್ತೆ (Sp.). 2, to abandon, to quit. ಒಡಲ ಹೋಗಾಡಿದರು (*i. e.* -ರೂ), ನುಡಿ ನೀಗಾಡಿದರು (*i. e.* -ರೂ), etc. (see Sp. s. ನೀಗಾಡು). 3, to lose (Bp. 21, 47; 22, 40; 42, 28; 54, 39. 41; 58, 44). 4, to discharge (as an obligation, Bh. 8, 24, 42). — ಹೋಗು ಹೋಗು. rep. (Bp. 12, 3; 28, 10; 37, 13; 60, 6; B. 3, 100; 4, 5. 67. 150. 218).

**ಹೋಗು hōgu. 2.** = ಪೋಗು 2. going; not coming about, failure. see ಆಗು-. — ಹೋಗೊಲೆ. -ಒಲೆ. = ಕೋಡೊಲೆ. (My.).

**ಹೋಗುವಿಕೆ hōguvike.** going, etc. (Si. 195. 264. 296. 390. 393. 395. 398. 399. 416; B. 5, 309). ತೀರಿ ಹೋಗುವಿಕೆ (ಸಾತಿ Si. 424); ಆಗಿ ಹೋಗುವಿಕೆ (ಅರ್ಥ, ನಿವೃತ್ತಿ 429); ಕಾಣ ಬಾರದೇ ಹೋಗುವಿಕೆ (ಅಸ್ತ, ಅದರ್ಶನ 475).

**ಹೋಟಿ hōṭi.** = ಪೋಟಿ. resemblance, likeness, similarity (ಸರಿ, ದೊರೆ, ಪಾಸಟಿ, ಜೋಡು, ಹೊಯಿಕೆಯ್, ಸಂಗಡ, etc., ಸಮಾನ Ś s.).

**ಹೋಟೆ hōṭe.** = ಪೋಟೆ. the hollow of a tree (see Nr. s. ಪೊಟೆ and ಹೋಟಿಲ್); a hollow, empty state (My.). ಹೊಱಗೆ ನೋಡಿದರೆ ಕೋಟೆ, ಒಳಗೆ ನೋಡಿದರೆ ಹೋಟೆ (Prv.). ಮರದ ಹೋಟೆ (ನಿಷ್ಕುಹ G.).

**ಹೋಟ್ರೆ hōṭre.** = ಹೊಟ್ರೆ, etc. a hollow, etc.

**ಹೋತ hōta.** = ಪೋತ, etc., ಹೋತು. a he-goat q. v., ಹೋನ್ತು. (My.; ಸ್ತುಭ, etc. Si. 323; see ತಿಣ್ಣೆ-). ಹೋತನಿಗೆ ಗಡ್ಡವೇ ಸಾಕ್ಷಿ. — ಮಾರಿಯ ಕಣ್ಣು ಹೋತನ ಮೇಲೆ. — ಮಾರಿಯ ಮನೆಗೆ ಹೋತ ಕನ್ನಾ ಕೊಱಿದ ಹಾಗೆ (Prvs.).

ಹೋತ hōta. Tbh. of ಹೋತೃ. see ಮೇಧೋ-.

ಹೋತಾರ hōtāra. Tbh. of ಹೋತೃ (Śmd. 104).

**ಹೋತು hōtu.** = ಹೋತ, etc. a he-goat (ಸ್ತುಭ, ಸ್ತಭ, ಛಾಗ, ವಸ್ತ, ಛಗಲಕ, ಅಜ Nr.; ಸ್ತಭ, ಛಾಗ, etc. Mr. 184; ಅಜ Nn. 47; S. Mhr.; B. 3, 9; 5, 23; see Sp. s. K. ಯಾತ). ಹೋತಿನ ಗಡ್ಡ ನೂತನವೆನ್ದು, ಕೊಯಿದರೆ ಕೋತಿ ಆದೀತೇ? (Prv.).

ಹೋತೃ hōtṛi. = ಹೋತ, ಹೋತಾರ. an offerer of an oblation or burnt-offering; *a priest who at sacrifice invokes the gods or recites the hymns of the ṛigvēda, a priest conversant with the ṛigvēda.*

ಹೋತ್ರ hōtra. anything intended or fit for offering with fire (generally clarified butter); the clarified butter so offered; an oblation with fire, a burnt-offering, a sacrifice. see ವೀತಿ-.

ಹೋತ್ರಿ hōtri. a sacrificing priest; the priest who offers the oblation. see ಅಗ್ನಿ-.

**ಹೋದ hōda.** = ಪೋದ. relative P. p. of ಹೋಗು 1.

**ಹೋನ್ತು hōntu.** = ಹೋತು, etc. a he-goat (ಅಜ, ಸ್ತುಭ, ವಸ್ತ, ಛಾಗ, ಛಗಲಕ, ಛಗ Hlā.).

**ಹೋಬಳಿ hōbaḷi.** a division of a tāluk (My.). — ಹೋ ಬಳಿಶಾನಭೋಗ. the accountant of a hōbaḷi (My.).

**ಹೋಬಳಿದಾರ hōbaḷi-dāra.** a chief of armed peons (My.; T. ಓಮ್ಬಡೈ=ಕಾವಲ್, custody).

**ಹೋಮ hōma.** = ಓಮ, etc. Bishop's weed. (My.).

**ಹೋಮ hōma.** the act of making an oblation to the gods by casting clarified butter into the fire, accompanied with reciting mantras; an oblation of clarified butter, an oblation with fire, a burnt-offering; *a sacrifice.* ಹೋಮಕ್ಕೆ ಹೋದಲ್ಲಿಯೂ ನಾಮ ಹಚ್ಚಿಕೊಳ್ಳಬೇಕೋ? — ಹೋಮ ತಿಳಿಯದಿದ್ದರೆ ಹೋಳಿಗೇ ಊಟ ಉಣ್ಣಲಿಕ್ಕೆ ತಿಳಿಯದೇ? — ತೇಮಾನದಿನ್ದ ಹೋಮಾ ಮಾಡಿ, ಗುಮಾನ ಪಟ್ಟ. — ನೇಮವಿದ್ದರೆ ವ್ರತ, ಹೋಮವಿದ್ದರೆ ಶೋಭನ. — ನೇಮ ಹೆಚ್ಚಿ, ಹೋಮ ಮಿಾಱಿ, ಶ್ವಾನನ ಹಾಗೆ ತಿರುಗಾಡುವದಾಯಿತು. — ಪ್ರೇಮದಿನ್ದ ಹೇಮ ಕೊಡಿಸಿ, ಹೋಮಕ್ಕೆ ತಪ್ಪೆ ತೀರಿಸಿದ. — ಸ್ನಾನ ತಪ್ಪಿದರೆ ಹೋಮದ ದಕ್ಷಿಣೆ ತಪ್ಪೀತೇ? (Prvs.). — ಹೋಮ ಹವನ. dupl. (My.).

**ಹೋಮಕರಣ hōma-karaṇa.** the act of making a hōma. ನಾಮ ಕರಣ ಇದ್ದಲ್ಲಿ ಹೋಮಕರಣ (Prv.).

**ಹೋಮಕುಣ್ಡ hōma-kuṇḍa.** a hole in the ground for receiving the consecrated fire for an oblation. (My.).

**ಹೋಮಧೇನು hōma-dhēnu.** a cow the milk of which is used for oblations (ಮಾಹೇಯಿ Hlā.; Mr. 180).

**ಹೋಮಶಾಲೆ hōma-śāle.** a chamber or place for keeping the sacred fire for oblations. (My.).

**ಹೋಮಾಗ್ನಿ hōma-agni.** sacrificial fire, the fire for an oblation. (My.).

**ಹೋಮಾನಲ hōma-anala.** = ಹೋಮಾಗ್ನಿ. (Rām. 1, 16, 47).

**ಹೋಯಿತು hōyitu.** = ಹೋಯಿತ್ತು, ಹೋಯ್ತು. third person neuter singular of the imperfect of ಹೋಗು 1. (Bp. 50, 40; 55, 6. 15; C.).

**ಹೋಯಿತ್ತು hōyittu.** = ಹೋಯಿತು, etc. (Bp. 14, 9).

**ಹೋಯ್ತು hōytu.** = ಹೋಯಿತು, etc. (C.).

**ಹೋರಿ hōri.** a bull calf, an uncastrated young male of the ox kind, a young bull (ತರ್ಣಕ, ವತ್ಸ Hlā.; Bp. 4, 53; C.; B. 3, 17; Tu. ಬೋರಿ). ಹಿಡಿಯಿಸಲ್ತಕ್ಕ ಹೋರಿ (ಆರ್ಷಭ್ಯ); ಆಱು ಹಲ್ಲ ಹೋರಿ (ಷೋಡಶ್, ಷಡ್ದಶನ Hlā.). ತಿದ್ದಲ್ ಆದ ಹೋರಿ (ದಮ್ಯ, ವತ್ಸತರ); ಗೂಳಿಯಾಗಿ ಮುದ್ರಿಸುವದಕ್ಕೆ ತಕ್ಕ ಹೋರಿ (ಆರ್ಷಭ್ಯ, ಷಣ್ಡತಾಯೋಗ್ಯ); ತಿದ್ದಲೆನ್ದು ನೊಗದ ಕೆಲದಲ್ಲಿ ಕಟ್ಟಿದ ಹೋರಿ (ಪ್ರಷ್ಠವಾಹ್, ಯುಗಪಾರ್ಶ್ವಗ); ಮೂಗುನೇಣ್ ಇಕ್ಕಿದ ಹೋರಿ (ನಸ್ತಿತ, ನಸ್ಯೋತ Nr.). 2, a bullock (Bp. 56, 28; Bh. 1, 10, 29; ಆರ್ಷಭ್ಯ, ಹರೆಯದ ಎತ್ತು G.). ಉತ್ತಮದ ಹೋರಿ (ಧೌಮ್ಯ Mr. 179). ಹೋರಿ ನೆಚ್ಚಿ ಹೊಲ ಮಾಡಬಾರದು, ಪೋರಿ ನೆಚ್ಚಿ ಬೇಱೆ ಆಗಬಾರದು. — ಹೋರಿ ನಡೆಯದಿದ್ದರೆ ದಾರಿ ಉದ್ದ ಅನ್ದ ಹಾಗೆ (Prvs.). see ಎಮ್ಮೆಹೋರಿ, ಕಿಱುಬೋರಿ, ಗೂಳಿಹೋರಿ, ತಿರ್ದುವ್ಪೋರಿ, ಬಲುಹೋರಿ, ಹಿಡಿಹೋರಿ. — ಹೋರಿಗಱು. -ಕಱು. a bull calf (Si. 319). — ಹೋರಿಯಡೆ. -ಅಡೆ. cowdung (ಗೋಮಯ Śm. 33).

**ಹೋರಿಕ hōrika. ಹೋರಿಗ hōriga.** see s. ಹೇರಿಗ.

**ಹೋರಿದು hōridu.** = ಹೊರ್ದು, ಹೋರಿ. P. p. of ಹೋರ್, ಹೋರು. (Bh. 1, 14 sum.; 7, 4, 42).

**ಹೋರಿಸು hōrisu.** = ಪೋರಿಸು, q. v. to cause to fight. (My.).

**ಹೋರು hōru. 1. ಹೋರ್.** = ಓರು 1, ಪೋರ್ 1. to wrestle; to fight; to altercate (Bp. 18, 11; 21, 36; 58, 34; J. 10, 31; 13, 55; 22, 29; My.). [ಒನ್ದು ಮಾತಿನ ಗೆಲ್ಲ-ಸೋಲಕ್ಕೆ ಹಿಡಿದು ಹೋರುವೆ Bv. 256; Cv. 31]. ಹೋರಿ ಬಾಱುವದಕ್ಕಿನ್ತ ಸೇರಿ ಬಾಱಬೇಕು. — ಹೋರುವ ಮುಣ್ಡೆ ಹೂರಿಗೆ ಬಿಟ್ಟಾಳೇ? — ಹೋರುವ ಹೆಣ್ಡತಿ, ನಾಱುವ ನೀರು ತ್ಯಜಿಸು! — ಸೋರುವ ಮನೆಯನ್ನೂ ಹೋರುವ ಹೆಣ್ಡತಿಯನ್ನೂ ದೂರ ಬಿಡಬೇಕು (Prvs.). — ಹೋರಟೆ. -ಅಟೆ. fight, strife; a fight, a battle, a combat (ಪೋರ್ಕೆ Bhn. 25, o. r. ಹೋರ್ಕೆ; Cpr. 8, 55; Rām. 4, 2, 36; 6, 50, 21; Bh. 1, 8, 2; 9, 2, 15; J. 22, 7). — ಹೋರಾಟ. -ಆಟ. mutual fight (with the hands); strife, contention, altercation (My.; ಹೋರಟೆ, ಜಗಳ G.). ತೇರಾಟಕ್ಕೆ ಹೋಗಿ, ಹೋರಾಟಾ ಮಾಡಿಕೊಣ್ಡ. — ನೀರುಳ್ಳಿಯವನ ಸಂಗಡ ಹೋರಾಟಕ್ಕೆ ಹೋದರೆ ಮೋಱೆಲ್ಲ ನಾಱದೇ? — ಮರಾಟರ ಹತ್ತರ ಹೋರಾಟ ಸಲ್ಲ (Prvs.). — ಹೋರಾಡು. -ಆಡು. to wrestle, to fight; to altercate (My.). ಎರಡು ಸೇನೆಗಳೂ ದೊಪ್ಪುಯಾಗಿ ಸೇರಿ ಹೋರಾಡುವ ದ್ವನ್ದ್ವಯುದ್ಧ (ತುಮುಲ Si. 294). — ಹೋರ್ಯಾಡು. -ಆಡು. = ಹೋರಾಡು. (My.). ಹಾಱುವ ಕಾಗೆ ಹೋರ್ಯಾಡಲಿಕ್ಕೆ ಬಲ್ಲಿತೇ (or ಬಲ್ಲದೇ? Prv.).

**ಹೋರು hōru. 2.** = ಪೋರ್ 3, (ಹೊದರು). a hole (B. 4, 91; ತೂತು G.).

**ಹೋರುಕುಳಿ hōru-kuḷi.** = ಪೋರ್ಕುಳಿ, q. v. a wrestler.

**ಹೋರೆ hōre. ಹೋರಾ.** (fr. the Greek). the rising of a zodiacal sign; part of the duration of a sign; an hour; a mark, line; a particular scientific work or science. (My.).

**ಹೋಱೆ hōṟe.** (= ಹೊಱೆಗೆ). business, work (My.).

**ಹೋಱೆಗ hōṟega.** a servant (Śāstrasāra in W. v. 1297; Bh. 1, 13, 5).

**ಹೋಱೇವು hōṟēvu.** = ಹೋಱೆ. ಹೋಱೇವು ಇಲ್ಲದೆ ಮಠಕ್ಕೆ ಹೋದರೆ ಮಠಪತಿ ಮೂಱು ಬೊಟ್ಟು ವಿಭೂತಿ ಹಚ್ಚಲಿಕ್ಕೆ ಬನ್ದ. — ಹೋಱೇವು ಇಲ್ಲದ ಹೊಱ ಗೋಡೆ ಸಾರಿಸಿದರು (Prvs.).

**ಹೋರ್ಕೆ hōṟke.** = ಪೋರ್ಕೆ, q. v. fighting, battle, etc.

**ಹೋಲ್ hōl.** = ಪೋಲ್ 1, etc. to be like, to resemble. ಹೋಲ್ತೆ (Dp. 67, 3. 5).

**ಹೋಲಿಕೆ hōlike.** = ಪೋಲ್ಕೆ. resemblance, similitude, likeness (ಉಪಮೆ, ಉಪಮಾನ Nr.; ಸಾಮ್ಯ Nr.; ಉಪಮೆ Dhw.; My.). ಶಿವುಡನಿಗೂ ಮೂಗನಿಗೂ ಹೋಲಿಕೆ ಆದವನು (ಅನೇಡಮೂಕ Si. 363). see Prv. s. ಮಾತು.

**ಹೋಲಿಸು hōlisu.** = ಪೋಲಿಸು, etc. to cause to resemble; to make analogous; to compare (Bp. 25, 11; 26, 41; 30, 6; 34, 10; 37, 67; 50, 35; 54, 12; J. 17, 59). ಒನ್ದನ್ನು ಒನ್ದಕ್ಕೆ ಹೋಲಿಸು, or ಒನ್ದನ್ನು ಒನ್ದಱ ಸಂಗಡ ಹೋಲಿಸು (My.).

**ಹೋಲು hōlu.** = ಹೋಲ್, etc. (Bp. 38, 61; 40, 13; 55, 18; Bh. 4, 4, 83. 84; 8, 4, 31; C.). ತನ್ದೆಯ ಹೋಲುವಾತನು (ಪಿತೃಸನ್ನಿಭ, etc. Nr.). ಅರಿಸಿನಪಕ್ಷಿಯನ್ನು ಹೋಲಿ ಹೆಣ್ಣುಕೋತಿಯ ಮುಖದನ್ತೆ ಕೆಮ್ಪಾದ ಬಣ್ಣ (ಶ್ಯಾವ, ಕಪಿಶ Si. 52); ತನ್ದೆಯನ್ನು ಹೋಲಿದವನು (ಮನೋಜವ, ಪಿತೃಸನ್ನಿಭ 355). ತನ್ದೆಯನ್ನು ಹೋಲು, ತನ್ದೆಗೆ-, or ತನ್ದೆಯೊಡನೆ- (My.). ಕೂಸು ಕಾಸು ಹೋಲದು, ಜೋಗುಳ ಮುಗಿಲು ಮುಟ್ಟಿತು (Prv.). ಹುಲಿಯ ಆಕಾರವು ಸ್ವಲ್ಪ ಸಿಂಹನನ್ನು ಹೋಲುತ್ತದೆ (B. 4, 35). ತುಳುವು ಮಲೆಯಾಳ ಲಿಪಿಯನ್ನು ಹೋಲುತ್ತದೆ (4, 130). ಹಾಲುವ್ಪ ಹಂಸವನು ಹೋಲಬಲ್ಲನೆ ಯೋಗಿ? ಮೇಲಣ ಪಥವನಱಿಯದೊಡೆ ಗಿಣಿ ಯೋದಿ ಕಾಱುಗೆಡದನ್ತೆ (Sp.).

**ಹೋಲುವಿಕೆ hōluvike.** = ಹೋಲಿಕೆ. (B. 3, 47; 5, 15). ಸರಿ ಹೋಲುವಿಕೆ (ಅನುಹಾರ, ಅನುಕಾರ Si. 393).

**ಹೋಲುವೆ hōluve.** = ಪೋಲ್ವೆ. resemblance, etc. (ಅನುಹಾರ, ಅನುಕಾರ Nr.; ಪ್ರಕಾರ, ಸಾದೃಶ್ಯ Nr.).

**ಹೋಲ್ವಿಕೆ hōlvike.** = ಹೋಲುವಿಕೆ. (ಪ್ರಕಾರ, ಸಾದೃಶ್ಯ Si. 448; ಅನು, ಸಾದೃಶ್ಯ 468; ಉಪಮೆ 469).

**ಹೋಷು hōṣu.** ardour, eagerness; consciousness, as opposed to insensibility (Mhr., H. ಹೋಷ; R.).

**ಹೋಸ್ hōs.** = ಉಸ್, etc. a sound used in scaring away animals (My.).

